

# ಶ್ರೀ ನಿಡುಮಾಮಿಡಿ ಸನ್ನಿಧಿಯವರು

ಅ. ನ. ಕೃಷ್ಣರಾಯ



ಪ್ರಕಾಶಕರು:

ಪ್ರಬೋಧ ಪುಸ್ತಕಮಾಲೆ



# ಮುನ್ನುಡಿ

ಶ್ರೀ ಪಂಡಿತಾರಾಧ್ಯ ಪರಂಪರಾಗತ ಶ್ರೀ ನಿಡುಮಾಮಿಡಿ ಶ್ರೀಗಳವರ ಹನ್ನೆರಡನೆಯ ವಾರ್ಷಿಕೋತ್ಸವ ಸಮಾರಂಭದ ನೆನಪಿಗಾಗಿ ನಾನು ಶ್ರೀಗಳವರ ಕೃತಿಗಳನ್ನು ಕುರಿತು ಒಂದು ಗ್ರಂಥ ಬರೆದುಕೊಡಬೇಕೆಂದು ಉತ್ಸವ ಮಂಡಳಿಯ ಮಿತ್ರರು ಕೇಳಿದರು. ಶ್ರೀಗಳವರನ್ನು ನಾನು ಸುಮಾರು ಹನ್ನೆರಡು ವರ್ಷಗಳಿಂದ ಬಲ್ಲೆ. ಅವರ ಲೇಖನಗಳನ್ನು ಗ್ರಂಥಗಳನ್ನು ಆದರದಿಂದ ಓದುತ್ತಿದ್ದೇನೆ. ಅವರ ಪ್ರಾಗತಿಕ ಮನೋಭಾವ, ಸಮಾಜಸೇವಾಕಾರ್ಯಗಳನ್ನು ನೋಡಿ ಹರ್ಷಿಸುತ್ತಿದ್ದೇನೆ. ನನ್ನ ವಿಶ್ವಾಸಿಗಳಾದ ಶ್ರೀಗಳವರ ಮೇಲೆ ಬರೆಯುವುದು ನನಗೆ ಸಂತೋಷದ ಕೆಲಸವೇ ಆಯಿತು.

ಶ್ರೀಗಳವರ ಚರಿತ್ರೆಗಿಂತ ಅವರ ಕೃತಿಗಳಿಗೇ ಈ ಗ್ರಂಥದಲ್ಲಿ ನಾನು ಪ್ರಾಧಾನ್ಯಕೊಟ್ಟಿದ್ದೇನೆ. ಶ್ರೀಗಳವರ ಕೃತಿವಿಮರ್ಶೆಯನ್ನು ನಾನು ಅಭಿಮಾನಕ್ಕೆ ಕಟ್ಟುಬೀಳದೆ ಸ್ವಲ್ಪ ನಿರ್ದಾಕ್ಷಿಣ್ಯದಿಂದಲೇ ಮಾಡಿರುವುದನ್ನು ಓದುಗರು ಗಮನಿಸಬಹುದು. ಕೃತಿನಿರ್ಮಾಣಕ್ಕೆ ಅಭಿಮಾನ ಕ್ರತುಶಕ್ತಿಯನ್ನೊದಗಿಸಿದರೂ ಉಳಿಯುವುದು ಸತ್ಯವೊಂದೇ. ಶ್ರೀಗಳವರ ನನ್ನ ವಿಚಾರಗಳ ಸಾಮ್ಯತೆಯನ್ನು ಸೂಚಿಸುವುದರ ಜತೆಗೆ ಅಂತರವನ್ನೂ ಸೂಚಿಸಿದ್ದೇನೆ. ಈ ಗ್ರಂಥದಲ್ಲಿ ವಿಮರ್ಶೆ ಹಾಗೂ ಸಂಕಲನ ಎರಡಕ್ಕೂ ನಾನು ಎಡೆಕೊಟ್ಟಿದ್ದೇನೆ. ಶ್ರೀಗಳವರ ಗ್ರಂಥಗಳಿಂದ ಕೆಲವು ಭಾಗಗಳನ್ನೂ ಧಾರಾಳವಾಗಿ ಉದ್ಧರಿಸಿ ಬಳಸಿಕೊಂಡಿದ್ದೇನೆ. ಶ್ರೀಗಳವರ ಎಲ್ಲಾ ಗ್ರಂಥಗಳನ್ನೋದುವುದಕ್ಕೆ ನನ್ನ ಈ ಗ್ರಂಥ ಪ್ರೇರಕವಾದರೆ ನನ್ನ ಶ್ರಮ ಸಾರ್ಥಕವಾಗುತ್ತದೆ.

ಮೊದಲನೆಯ ಅಧ್ಯಾಯದಲ್ಲಿಯೂ ಅನುಬಂಧದಲ್ಲಿಯೂ ಶ್ರೀಗಳವರ ಪೀಠದ ಸಂಬಂಧವಾಗಿ ತಿಳಿದುಬರುವ ಕೆಲವು ವಿಷಯಗಳನ್ನು ಸೇರಿಸಿದ್ದೇನೆ.

ಇದಕ್ಕೆ ನಾನು ಶ್ರೀ ಎಸ್. ಹಂಪಯ್ಯನವರ 'ಶ್ರೀ ನಿಡುಮಾಮಿಡಿ ಸ್ವಾಮಿಗಳವರ ಸಂಕ್ಷಿಪ್ತ ಚರಿತ್ರೆ' ಗ್ರಂಥಕ್ಕೂ, ಅದರ ಮುನ್ನುಡಿಯಲ್ಲಿಯೂ, ಪತ್ರಿಕೆಗಳಿಗೂ ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರು ಬರೆದಿರುವ ಲೇಖನಗಳಿಗೂ, ಶ್ರೀ ಅಕ್ಕಲಯ್ಯ ದೀಕ್ಷಿತರು ಬರೆದಿರುವ 'ಶ್ರೀಶೈಲ ಪಂಡಿತಾರಾಧ್ಯ ಮೂಲಪೀಠಮು' ಗ್ರಂಥಕ್ಕೂ ವಿಶೇಷ ಋಣಿಯಾಗಿದ್ದೇನೆ. ಅಡಿಟಿಪ್ಪಣಿಗಳಲ್ಲಿ ಸೂಚಿಸಿರುವ ಆಧಾರ ಗ್ರಂಥಗಳನ್ನೂ, ಪುಲ್ಲಕವಿ, ಇಡಗೂರು ರುದ್ರಕವಿ, ಅಪ್ಪಪ್ಪಕವಿ ಇವರ ತಾಳೇಗರಿ ಮತ್ತು ಕಾಗದದ ಹಸ್ತಪ್ರತಿಗಳನ್ನೂ, ಅಚ್ಚಾದ ಗ್ರಂಥಗಳನ್ನು ನೋಡಿದ್ದೇನೆ. ನಾನು ನೆರವು ಪಡೆದಿರುವ ಎಲ್ಲ ಗ್ರಂಥಗಳ ಹಾಗೂ ಗ್ರಂಥಕರ್ತರ ಹೆಸರುಗಳನ್ನು ಅಲ್ಲಲ್ಲಿ ಅಡಿಟಿಪ್ಪಣಿಯಲ್ಲಿಯೋ ಗ್ರಂಥಗರ್ಭದಲ್ಲಿಯೋ ಸೂಚಿಸಿದ್ದೇನೆ. ಆಯೆಲ್ಲ ಗ್ರಂಥಕರ್ತರಿಗೆ ನನ್ನ ಕೃತಜ್ಞತೆ ಸಲ್ಲುತ್ತದೆ.

ಮುದ್ರಣಕ್ಕೆ ನಾನಾರೀತಿಯ ಕಷ್ಟವನ್ನೊದಗಿಸುವ ಈ ಗ್ರಂಥವನ್ನು ಒಂದೇವಾರದಲ್ಲಿ ಸುಂದರವಾಗಿ ಅಚ್ಚುಮಾಡಿಕೊಟ್ಟಿರುವ ಶ್ರೀ ಸತ್ಯನಾರಾಯಣ ಮುದ್ರಣಾಲಯದ ಒಡೆಯರಾದ ಶ್ರೀ ವಿ. ರಾಮಯ್ಯನವರ ಉಪಕಾರ ನೆನೆಯಬೇಕಾದುದು ನನ್ನ ಕರ್ತವ್ಯ.

"ಅನ್ನಪೂರ್ಣ," ವಿಶ್ವೇಶ್ವರಪುರಂ
ಬೆಂಗಳೂರು ೪.
೨೭-೬-೧೯೫೧

ಅ. ನ. ಕೃಷ್ಣರಾಯ.

## ಸಂಪಾದಕರ ಬಿನ್ನಹ

ಶ್ರೀಮನ್ನಿಡುಮಾಮಿಡಿ ಶ್ರೀ ಶೈಲ ಜಗದ್ಗುರು ಮಹಾಸ್ವಾಮಿಗಳವರ ೧೨ನೇ ವಾರ್ಷಿಕೋತ್ಸವ ಸಮಾರಂಭದ ಸವಿನೆನಪಿಗಾಗಿ ಸನ್ನಿಧಿಯವರ ಬಗ್ಗೆ ಒಂದು ಗ್ರಂಥವನ್ನು ಪ್ರಕಟಿಸಬೇಕೆಂದು ಪೀಠದ ಶಿಷ್ಯಮಂಡಲಿ ನಿರ್ಧರಿಸಿತು. ಈ ಕಾರ್ಯವನ್ನು ನೆರವೇರಿಸಿಕೊಡಲು ಸುಪ್ರಸಿದ್ಧ ಕನ್ನಡ ಸಾಹಿತಿಗಳಾದ ಶ್ರೀ ಅ. ನ. ಕೃಷ್ಣರಾಯರನ್ನು ಪ್ರಾರ್ಥಿಸಿದಾಗ ಅವರು ಬಹು ಸಂತೋಷದಿಂದ ಕಾರ್ಯವನ್ನು ಕೈಗೊಂಡು ತಮ್ಮ ಪ್ರಯತ್ನದಲ್ಲಿ ಯಶಸ್ವಿಗಳಾಗಿದ್ದಾರೆ. ರಾಯರ ಲೇಖನಿ ನಿಶಿತ ಹಾಗೂ ಹರಿತ. ಅವರು ವಿಚಾರವೇದಿಕೆಯ ಒರೆಗಲ್ಲನ್ನಿಟ್ಟುಕೊಂಡೇ ತಮ್ಮ ಲೇಖವನ್ನುಲ್ಲೇಖಿಸಿರು ವುದು ಗ್ರಂಥಕ್ಕೆ ಇಮ್ಮಡಿಯಾದ ಕಳೆಯನ್ನಿತ್ತಿದೆಯೆಂಬುದು ಓದುಗರಿಗೆ ಅರಿವಾಗುವುದು. ಇದಕ್ಕಾಗಿ ವಾರ್ಷಿಕೋತ್ಸವ ಸಮಿತಿಯ ಪರವಾಗಿ ಶ್ರೀ ಅ. ನ. ಕೃಷ್ಣರಾಯರಿಗೆ ಚಿರಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಇಂಥ ಅಮೂಲ್ಯ ಗ್ರಂಥಕುಸುಮವನ್ನು ಕನ್ನಡಿಗರ ಅಂಜಲಿಯಲ್ಲಿಡುವ ಸೌಭಾಗ್ಯವನ್ನು ಪ್ರಬೋಧ ಪುಸ್ತಕಮಾಲೆಗೆ ದೊರಕಿಸಿಕೊಟ್ಟುದಕ್ಕಾಗಿ ಶ್ರೀ ಅ. ನ. ಕೃ. ಅವರಿಗೂ ಸಂಸ್ಥಾನದ ಶಿಷ್ಯಮಂಡಲಿಗೂ ಋಣಿ ಯಾಗಿರುತ್ತೇನೆ.

೨೮—೬—೧೯೫೧
ಬೆಂಗಳೂರು

ಎಂ. ಜಿ. ನಂಜುಂಡಾರಾಧ್ಯ
ಸಂಪಾದಕ.

# ಪ ರಿ ವಿ ಡಿ



ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರು
ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ, ಗೂಳೂರು.

# ೧. ನಿಡುಮಾಮಿಡಿಪೀಠ

ವೀರಶೈವಮತದ ಪ್ರಾಚೀನ ಪಂಚಪೀಠಗಳಾದ ಬಾಳೆಹೊನ್ನೂರು, ಉಜ್ಜಯಿನಿ, ಹಿಮಾಲಯ, ಶ್ರೀಶೈಲ, ಕಾಶಿ ಧರ್ಮಪೀಠಗಳು ಲೋಕ ವಿಖ್ಯಾತರಾದ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ, ವಿಶ್ವಾರಾಧ್ಯರಿಂದ ಅಲಂಕೃತವಾಗಿದ್ದವು. ಪಂಡಿತಾರಾಧ್ಯರ ಮೂಲಪೀಠ ಕರ್ನೂಲು ಡಿಸ್ಟ್ರಿಕ್ಟ್ ನಂದಿ ತೋಟಕನೂರು ತಾಲ್ಲೂಕಿಗೆ ಸೇರಿದ ಸಾಲಾಮಲೀ ಪರ್ವತಪಂಙ್ಕ್ತಿಯಲ್ಲಿರುವ ಶ್ರೀಶೈಲ ಪರ್ವತದ ಮೂಲದಲ್ಲಿರುತ್ತದೆ.

ಪಂಡಿತಾರಾಧ್ಯ ಶಿವಾಚಾರ್ಯರು ಬಹಳಕಾಲ ಜೀವಿಸಿದ್ದು, ಬ್ರಹ್ಮ ಸೂತ್ರಗಳ ಮೇಲೆ ಭಾಷ್ಯ ಬರೆದು, ಸಾನಂದ ಮಹರ್ಷಿಗೆ ವೀರಶೈವ ಸಿದ್ಧಾಂತ ವನ್ನು ಉಪದೇಶಿಸಿದಂತೆ ತಿಳಿದುಬರುತ್ತದೆ. ಇವರ ಶಿಷ್ಯರೇ ವಿರೂಪಾಕ್ಷ ದೇಶಿಕೇಂದ್ರ ಶಿವಾಚಾರ್ಯರು, ಇವರು ಪ್ರಸಿದ್ಧ ಭಾಷ್ಯಕಾರರಾದ ಶ್ರೀಪತಿ ಪಂಡಿತರನ್ನೂ ಅವರ ಅನುಯಾಯಿಗಳನ್ನೂ ಶಿಷ್ಯರನ್ನಾಗಿ ಪರಿಗ್ರಹಿಸಿ ದರು. ಕಾಶಿಯಲ್ಲಿ ಒಂದು ಮಠವನ್ನು ಕಟ್ಟಿಸಿದರು. ಕಾಶೀ ಮಹಾರಾಜನ ಸಮ್ಮುಖದಲ್ಲಿ ಅಮಾವಾಸ್ಯೆದಿನ ಚಂದ್ರದರ್ಶನ ಮಾಡಿಸಿದರೆಂಬ ಪ್ರತೀತಿ ಯಿದೆ. ಅದರ ಜ್ಞಾಪಕಾರ್ಥವಾಗಿ ತಮ್ಮ ಶಿಷ್ಯವರ್ಗದಲ್ಲಿದ್ದ ಒಬ್ಬ ಮೂರ್ತಿಗೆ ಚಂದ್ರಗುಂಡದೇಶಿಕೇಂದ್ರ ಶಿವಾಚಾರ್ಯರೆಂದು ಹೆಸರಿಟ್ಟು ತಮ್ಮ ಶ್ರೀಶೈಲಪರ್ವತ ಸಿಂಹಾಸನ ಪಟ್ಟಾಧಿಕಾರವನ್ನು ವಹಿಸಿದರು. ಚಂದ್ರಗುಂಡ ದೇಶಿಕೇಂದ್ರರು ತಮ್ಮ ಗುರುಗಳಂತೆಯೇ ಪವಾಡಪುರುಷರಾಗಿದ್ದರು. ಒಂದು ದಿನ ಚೋಳರಾಜೇಂದ್ರನ ಉದ್ಯಾನವನದಲ್ಲಿ ಮಧ್ಯಾಹ್ನದವೇಳೆ ಇದ್ದಾಗ ಶಿವಾರ್ಚನೆಯಾದನಂತರ ಆರೋಗಣೆಯ ಆಹಾರಪದಾರ್ಥಗಳು ಸಿದ್ಧವಾಗಿಲ್ಲ ವಾದುದನ್ನು ಕಂಡು ತೆಂಗಿನಮರವನ್ನೇ ಭಿಕ್ಷೆ ಬೇಡಿದರು. ತೆಂಗಿನಮರ ಬಾಗಿ ಶ್ರೀಗಳವರ ಕೈಗೆ ಫಲಗಳನ್ನು ಕೊಟ್ಟಿತು. ರಾಜನಿಗೆ ಪ್ರಾಪ್ತವಾಗಿದ್ದ ಬ್ರಹ್ಮಹತ್ಯಾದೋಷವನ್ನು ಪರಿಹರಿಸಿ ಅವನನ್ನು ಶಿಷ್ಯನನ್ನಾಗಿ ಪರಿಗ್ರಹಿ

ಸಿದರು. ರಾಜ ತನ್ನ ಉದ್ಯಾನವನದ ಬಳಿಯಲ್ಲಿಯೇ ಮಠವನ್ನು ಕಟ್ಟಿಸಿ ಭೂಸ್ಥಿತಿಗಳನ್ನ ರ್ಪಿಸಿದ. ಚಂದ್ರಗುಂಡದೇಶಿಕೇಂದ್ರರು ಪ್ರಸಿದ್ಧ ವಚನ ಕಾರನಾದ ದೇವರ ದಾಸಿಮಯ್ಯನಿಗೆ ಲಿಂಗಧಾರಣೆಮಾಡಿ ತಮ್ಮ ಶಿಷ್ಯನನ್ನಾಗಿ ಪರಿಗ್ರಹಿಸಿದರು. ದೇವಾಂಗ ಶಿವಾಚಾರಸ್ಥರೆಂದು ಹೆಸರಾಗಿರುವ ಅವನ ವಂಶದವರು ಇಂದಿಗೂ ಗೂಳೂರು ಪೀಠಕ್ಕೆ ನಡೆದುಕೊಳ್ಳುತ್ತಿದ್ದಾರೆ. ಇವರ ಶಿಷ್ಯರೇ ಕರಿಬಸವದೇಶಿಕೇಂದ್ರಸ್ವಾಮಿಗಳವರು. ಶ್ರೀಗಳವರು ಒಣಗಿದ ಮಾವಿನಮರದ ಮೇಲೆ ತಮ್ಮ ಕಮಂಡಲೋದಕದಿಂದ ಪ್ರೋಕ್ಷಣೆ ಮಾಡಲು ಮಾವಿನಮರ ಚಿಗುರಿ, ಫಲಗಳನ್ನು ನೀಡಿದುದರಿಂದ, ಆ ಕ್ಷೇತ್ರಕ್ಕೆ 'ನೀಡುಮಾಮಿಡಿ' ಎಂದು ಹೆಸರಾಯಿತು. ಶ್ರೀಗಳವರಿಗೆ ಗೂಳೂರು ನಿಡುಮಾಮಿಡಿ ಸ್ವಾಮಿಗಳವರೆಂದು ಹೆಸರುಬಂದಿತು, ಶ್ರೀಗಳವರು ಲೋಕ ಸಂಚಾರಮಾಡಿ, ಸಹಸ್ರಾರು ಜನರಿಗೆ ಲಿಂಗಧಾರಣೆ ಮಾಡಿಸಿ, ಅನೇಕ ಪಾಳೆಯಗಾರರಿಂದ ಕಪ್ಪಕಾಣಿಕೆಗಳನ್ನು ಪಡೆದರು. ಇವರ ಶಿಷ್ಯರು ಇಮ್ಮಡಿ ಕರಿಬಸವದೇಶಿಕೇಂದ್ರ ಸ್ವಾಮಿಗಳವರು. ಇವರು ದಕ್ಷಿಣ ದೇಶವನ್ನೆಲ್ಲಾ ಪ್ರವಾಸಮಾಡಿ ಕಂಚಿ, ಚಿದಂಬರ, ರಾಮೇಶ್ವರ, ಕಾಳಹಸ್ತಿ ಗಳಲ್ಲಿ ತಮ್ಮ ಮಠಗಳನ್ನು ಸ್ಥಾಪಿಸಿದರು. ಇವರ ಶಿಷ್ಯರಾದ ಶಾಂತವೀರ ದೇಶಿಕೇಂದ್ರ ಸ್ವಾಮಿಗಳವರು ವಿಜಾಪುರದ ಸುಲ್ತಾನನೆದುರಿಗೆ ಪವಾಡ ಮೆರೆಯಿಸಿದರು. ಇವರ ಶಿಷ್ಯರಾದ ಕರಿಬಸವರಾಜೇಂದ್ರ ಸ್ವಾಮಿಗಳವರು ಡಿಲ್ಲಿ ಪಾದುಷಾರವರಿಗೆ ಸಂದರ್ಶನವನ್ನಿತ್ತು, ಅವರಿಂದ ರಾಜಯೋಗ್ಯವಾದ ಸನ್ಮಾನಗಳನ್ನು ಹೊಂದಿದರು. ಮಹಮ್ಮದೀಯರ ಪ್ರಸಿದ್ಧ ಯಾತ್ರಾಸ್ಥಳ ವಾದ ಮಕ್ಕಾಕ್ಷೇತ್ರಕ್ಕೆ ದಯೆಮಾಡಿಸಿರುವಲ್ಲಿ ಆ ಕ್ಷೇತ್ರಾಧಿಪತಿಗಳು ಇವರನ್ನು ಇಂಡಿಯಾದೇಶದ ಸಂನ್ಯಾಸಿಗಳೆಂದು ಸಂಬೋಧಿಸಿ ಮರ್ಯಾದೆಯೊಡನೆ ಬರ ಮಾಡಿಕೊಂಡರು. ಶ್ರೀ ಸ್ವಾಮಿಗಳು ಕೆಲವುಕಾಲ ಅಲ್ಲಿ ನೆಲಸಿದ್ದು ಅಲ್ಲಿಯೇ ಚಿಕ್ಕದಾದ ಮಠವನ್ನು ನಿರ್ಮಿಸಿದರು. ಅಲ್ಲಿನ ಗುರುಸ್ಥಾನಾಧಿಪತಿಗಳು ಶ್ರೀ ಸ್ವಾಮಿಗಳವರ ತಪೋನಿಷ್ಠೆಗೆ ಸಂತೋಷಿಸಿ ಇವರಿಗೆ ಹಸರು ಛತ್ರಿ, ಒಂಟೇ ಮೇಲೆ ಹಸುರು ನಿಶಾನಿ, ಮೊಹರ್ಚಾಲು ಮುಂತಾದ ಅತಿ ಶ್ರೇಷ್ಠ ಬಿರುದಾವಳಿ ಗಳನ್ನು ಆ ದೇಶದ ವಿಶೇಷ ನಾಣ್ಯಗಳನ್ನೂ ಕೊಟ್ಟರು. ಶ್ರೀ ಜಗದ್ಗುರು ಗಳನ್ನು ಕ್ಷೇಮವಾಗಿ ಕರೆದುಕೊಂಡು ಸನ್ಮಾನಿಸಿ ಆ ಕ್ಷೇತ್ರದ ಮುಖಂಡರು

ಇಂಡಿಯಾದೇಶದ ಗಡಿಯವರೆವಿಗೂ ಬಂದು ಬೀಳ್ಕೊಟ್ಟರು.* ಇವರ ಶಿಷ್ಯರು **ಮರಿ ಕರಿಬಸವದೇಶಿಕೇಂದ್ರ ಸ್ವಾಮಿಗಳು.** ಇವರು ದಕ್ಷಿಣ ದೇಶದಲ್ಲಿ ಪ್ರವಾಸಮಾಡಿ ವೀರಶೈವ ಮತ ಪ್ರಚಾರಮಾಡಿದರು. ಉಡುಪಿ, ಮೇಲುಕೋಟೆಗಳಲ್ಲಿ ಪವಾಡ ಮೆರೆಯಿಸಿದರು. ಇವರ ಶಿಷ್ಯರು **ಮಾಚೇಶ್ವರ ಶಿವಾಚಾರ್ಯ ಸ್ವಾಮಿಗಳು.** ಗೂಳೂರು ಮಠದ ತೆಂಗಿನ ತೋಟದಲ್ಲಿ ನಿತ್ಯವೂ ಕಾಯಿಗಳು ಮಾಯವಾಗುತ್ತಿದ್ದುದನ್ನು ಕಂಡು, ಕಳ್ಳರನ್ನು ಹಿಡಿತರಿಸಿ ವಿಚಾರಿಸಲಾಗಿ ಅವರು ಜೀವನೋಪಾಯಕ್ಕೆ ಬೇರೆ ಮಾರ್ಗ ವಿಲ್ಲದೆ ಕಳ್ಳತನ ಅವಲಂಬಿಸಿರುವುದಾಗಿ ಅರಿಕೆಮಾಡಿಕೊಂಡರು. ಶ್ರೀಗಳವರು ಅವರನ್ನು ಕ್ಷಮಿಸಿ, ಅವರ ಜೀವನೋಪಾಯಕ್ಕೆ ಮಾರ್ಗವನ್ನು ಕಲ್ಪಿಸಿ ಕೊಟ್ಟರು. ಇವರ ಶಿಷ್ಯರು **ಗುರುಸಿದ್ಧ ಬಸವರಾಜೇಂದ್ರ ಸ್ವಾಮಿಗಳು.** ಶ್ರೀಗಳವರ ಶಿಷ್ಯನಾದ ಅನಂತಪುರದ ದೊರೆ ಪವಾಡಪ್ಪನು ಕಡಪಾದೇಶದ ಸುಲ್ತಾನರ ಅಧಿಕಾರಿಗಳ ಕೈಸೆರೆಯಾಗಲು ಶ್ರೀಗಳವರು ಸುಲ್ತಾನನೊಂದಿಗೆ ಸಂಧಾನ ನಡೆಸಿ ಪವಾಡಪ್ಪನನ್ನು ಉಳಿಸಿದರು. ಇವರ ಶಿಷ್ಯರು **ಇಮ್ಮಡಿ ಕರಿಬಸವದೇಶಿಕೇಂದ್ರ ಸ್ವಾಮಿಗಳು.** ಶ್ರೀರಂಗಪಟ್ಟಣದ ನವಾಬ ನಾಗಿದ್ದ ಹೈದರಾಲಿ ಖಾನ್ ಶ್ರೀಗಳವರ ಬಗ್ಗೆ ಬಹಳ ಭಕ್ತಿಗೌರವಗಳಿಂದ ನಡೆದುಕೊಳ್ಳುತ್ತಿದ್ದ. ಇವರ ಶಿಷ್ಯರು **ಕರಿಬಸವದೇಶಿಕೇಂದ್ರ ಸ್ವಾಮಿಗಳು.** ಮುಮ್ಮಡಿ ಕೃಷ್ಣರಾಜ ಒಡೆಯರಿಂದ ಶ್ರೀಗಳವರು ಸನ್ಮಾನಿತರಾದರು. ಇವರ ಶಿಷ್ಯರು **ಮರಿ ಕರಿಬಸವದೇಶಿಕೇಂದ್ರ ಸ್ವಾಮಿಗಳು.** ಶ್ರೀಗಳವರು ತಮ್ಮ ಮೂಲಪೀಠವಾದ ಶ್ರೀಶೈಲಕ್ಷೇತ್ರಕ್ಕೆ ದಯೆಮಾಡಿಸಿ ಅಲ್ಲಿ ಕೆಲವುಕಾಲ ನಿಂತು ತಮ್ಮ ಶಾಖಾಮಠದ ಸ್ವಾಮಿಗಳಾಗಿದ್ದ ಶ್ರೀ ಕರಿಸಿದ್ಧಸ್ವಾಮಿಗಳಿಂದ ಆದಿ ಪೀಠ ಮಠದ ಮೇಲ್ವಿಚಾರಕರಾಗಿರುವಂತೆ ಆರಾಧ್ಯವಂಶೀಯರಾದ ಮಾದುಲ ವೀರಯ್ಯನವರನ್ನು ನೇಮಿಸಿ ಅವರಿಗೆ ಇನಾಂ ಜಮೀನನ್ನು ಕೊಟ್ಟರು. ಇವರ ಶಿಷ್ಯರು **ಇಮ್ಮಡಿ ಕರಿಬಸವರಾಜದೇಶಿಕೇಂದ್ರ ಸ್ವಾಮಿಗಳು.** ಶ್ರೀಗಳವರು ಪಟ್ಟಕ್ಕೆ ಬಂದಾಗ ಅವರ ವಯಸ್ಸು ಎಂಟು.

---

* ಶ್ರೀಶೈಲ ಸಿಂಹಾಸನಾಧೀಶ್ವರ ಶ್ರೀ ನಿಡುಮಾಮಿಡಿ ಸ್ವಾಮಿಗಳವರ ಸಂಕ್ಷಿಪ್ತ ಚರಿತ್ರೆ: ಎಸ್. ಹಂಪಯ್ಯ—ಪುಟ ೧೨.

ಇವರಿಗೆ ವಿದ್ಯಾಸಂಪತ್ತು ಇರಲಿಲ್ಲ. ಶ್ರೀಗಳವರು ಎಪ್ಪತ್ತುವರ್ಷಕಾಲ ಪೀಠಾಧಿಕಾರಿಗಳಾಗಿದ್ದರು. ಇವರ ಶಿಷ್ಯರು ಪಟ್ಟದ ಮರಿ ಕರಿಬಸವರಾಜ ದೇಶಿಕೇಂದ್ರ ಸ್ವಾಮಿಗಳು. ಇವರಿಗೂ ವಿದ್ಯಾಸಂಪತ್ತು ಇರಲಿಲ್ಲ. ಮಠದ ಆಡಳಿತವರ್ಗದವರು ಪ್ರಬಲರಾಗಿ ಮಠ ದುರವಸ್ಥೆಗೆ ಬಂತು.

ಈಗ ಪಟ್ಟಕ್ಕೆ ಬಂದಿರುವ ಚೆನ್ನಬಸವರಾಜದೇಶಿಕೇಂದ್ರ ಶಿವಾಚಾರ್ಯ ಸ್ವಾಮಿಗಳವರು ಈ ಪರಂಪರೆಯಲ್ಲಿ ಹದಿನಾರನೆಯವರು.

ಪಂಚಾಚಾರ್ಯರಲ್ಲಿ ಒಬ್ಬರಾದ ಪಂಡಿತಾರಾಧ್ಯರಿಂದ ಸ್ಥಾಪಿತವಾದ ನಿಡುಮಾಮಿಡಿ ಶ್ರೀಶೈಲಪೀಠ ಸುಮಾರು ಹತ್ತು ಶತಮಾನಗಳ ಇತಿಹಾಸದಿಂದ ಲಂಕೃತವಾಗಿರುವುದು ಕಂಡುಬರುತ್ತದೆ. ಈ ಪರಂಪರೆಯಲ್ಲಿ ಮಹಿಮಾಶಾಲಿಗಳೂ, ತಪೋಮೂರ್ತಿಗಳೂ ಆದ ಶ್ರೀಗಳವರು ಪೀಠವನ್ನಲಂಕರಿಸಿ ತಮ್ಮ ಭಕ್ತಿ, ವೈರಾಗ್ಯ, ಜ್ಞಾನದಿಂದ ಲೋಕಕಲ್ಯಾಣ ಮಾಡಿದರು. ಇಮ್ಮಡಿ ಕರಿಬಸವರಾಜದೇಶಿಕೇಂದ್ರ ಸ್ವಾಮಿಗಳವರಿಂದ ಈಚೆಗೆ ಮಠದ ಕೀರ್ತಿ ಇಳಿಮುಖವಾಯಿತು. ಈ ಪರಿಸ್ಥಿತಿಯನ್ನೆದುರಿಸಿ ಮಠದ ಕೀರ್ತಿಯನ್ನು ಪುನಃ ಸ್ಥಾಪಿಸಿ ಅದನ್ನು ಆರಂಭದ ವೈಭವದೆಸೆಗೆ ಒಯ್ಯುವ ಉತ್ತರವಾದಿತನ ಶ್ರೀ ಚನ್ನಬಸವರಾಜದೇಶಿಕೇಂದ್ರ ಸ್ವಾಮಿಗಳವರ ಹೆಗಲಮೇಲೆ ಬಿತ್ತು.

---

## ೨. ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳು

೧

ಮನೆಯ ಯಜಮಾನಸರಿಗೆ ಮೂವರು ಹೆಣ್ಣುಮಕ್ಕಳು, ಒಬ್ಬನೇ ಗಂಡುಮಗ. ಆದ ಗಂಡುಮಕ್ಕಳೆಲ್ಲಾ ಶಿವೈಕ್ಯರಾದರು. ಗಂಡುಮಗನಿಲ್ಲ ವಲ್ಲಾ ಎಂಬ ಕೊರಗು ತಾಯಿತಂದೆಗಳನ್ನು ಕಾಡಿಸಿತು. ಕೊನೆಗೆ ಇವರ ಭಕ್ತಿಗೆ ಶಿವ ಮೆಚ್ಚಿದನೋ ಎಂಬಂತೆ ಆನಂದ ಸಂವತ್ಸರದಲ್ಲಿ (೧೯೧೪) ಗಂಡುಮಗುವಾಯಿತು. ಆದರೆ ಮಗು ತೀರ ಕೃಶವಾಗಿತ್ತು. ದುರ್ದೈವದಿಂದ ತಾಯಿಯ ಮೊಲೆವಾಲು ಇಂಗಿಹೋಗಿತ್ತು. ಹಸುವಿನ ಹುಯ್ಯಹಾಲಿ ನಲ್ಲಿಯೇ ಮಗು ಬೆಳೆಯಬೇಕಾಯಿತು. ಮಗನನ್ನು ತಾಯಿತಂದೆಗಳು ವಿಶೇಷ ಮಮತೆಯಿಂದ ಬೆಳಸಿದರು. ಮಗುವಿಗೆ ಐದನೆಯ ವರ್ಷ ತುಂಬಿದ ಕೂಡಲೆ ತಾಯಿ ಕೈಲಾಸವಾಸಿಗಳಾದರು. ತಂದೆ ತಲೆಯಮೇಲೆ ಕೈಹೊತ್ತು ಕುಳಿತರು. ಹಿತವರು ಬಂದು ಪುನರ್ವಿವಾಹಮಾಡಿಕೊಳ್ಳಲು ಸಲಹೆ ಯಿತ್ತರು. ತಮ್ಮ ಪುನರ್ವಿವಾಹದಿಂದ ಮಕ್ಕಳ ಸಮಸ್ಯೆ ಬಗೆಹರಿಯದೆಂದು ಮನಗಂಡ ತಂದೆಯವರು, ತಮ್ಮ ಹೆಣ್ಣುಮಕ್ಕಳ ಸಹಕಾರದಿಂದ ಸಂಸಾರ ಸಾಗಿಸಲು ನಿರ್ಧರಿಸಿದರು.

ಗಂಡುಮಗ ಚಂದ್ರಶೇಖರನಿಗೆ ಶಾಲಾಶಿಕ್ಷಣ ಆರಂಭವಾಯಿತು. ಮೂರು ವರುಷಗಳು ಕಳೆದವು. ಚಂದ್ರಶೇಖರ ಮೂರನೆಯ ಕ್ಲಾಸಿನಲ್ಲಿ ಉತ್ತೀರ್ಣ ನಾಗಲಿಲ್ಲ. ಮನೆಯ ತೊಂದರೆಯೂ ಅಧಿಕವಾಗಿತ್ತು. ತಂದೆ ಮಗನನ್ನು ಶಾಲೆಬಿಡಿಸಿ ದನಕಾಯುವುದಕ್ಕೆ ಹಾಕಿದರು.

ಆದರೆ ಚಂದ್ರಶೇಖರ ದನಕಾಯುವುದಕ್ಕೆ ಹುಟ್ಟಿರಲಿಲ್ಲ. ಅವನ ಜಾತಕ ಹೆಚ್ಚಿನ ಕರ್ತವ್ಯದ ಹೊಣೆಗಾರಿಕೆಯನ್ನು ಅವನಿಗೆ ಒಪ್ಪಿಸಿತ್ತು. ೧೯೨೩ರಲ್ಲಿ ಅಡ್ನೂರಿನ ಮಲ್ಲಿಕಾರ್ಜುನಗೌಡರು, ಚಂದ್ರಶೇಖರನ ಊರಾದ ೩ಿಂಬರಗಟ್ಟಿಗೆ ಬಂದರು. ಅವರು ಚಂದ್ರಶೇಖರನ ತಂದೆಯವರನ್ನು ಕಂಡು

"ನಮ್ಮ ತಂದೆಯವರಾದ ಪ್ರಭುಗೌಡರ ಸತ್ಯಸಂಕಲ್ಪದಂತೆ ನಾವು ಅಡ್ನೂರಿನಲ್ಲಿ ಒಂದು ಮಠ ಕಟ್ಟಿಸಿದ್ದೇವೆ. ಮಠಕ್ಕೆ ಸ್ವಾಮಿಯಾಗಲು ಒಬ್ಬ ಯೋಗ್ಯನಟು ಬೇಕು. ನಾವೇ ಅವನನ್ನು ಓದಿಸಿ ಮಠದ ಅಧಿಕಾರ ಕೊಡುತ್ತೇವೆ"

ಎಂದು ಹೇಳಿದರು. ಚಂದ್ರಶೇಖರನ ತಂದೆ ಮಗನ ಕಡೆ ತಿರುಗಿ

"ಏನಪ್ಪಾ, ನೀನು ಸ್ವಾಮಿ ಆಗುತ್ತೀಯೇನು ?"

ಎಂದು ಕೇಳಿದರು. ಓದುವ ಅಪೇಕ್ಷೆ ಚಂದ್ರಶೇಖರನಲ್ಲಿ ಉತ್ಕಟವಾಗಿದ್ದುದರಿಂದ ಈ ಅವಕಾಶ ಕಳೆದುಕೊಳ್ಳಲು ಅವನು ಇಚ್ಛೆ ಪಡಲಿಲ್ಲ.

"ಓ! ಆಗಬಹುದು"

ಎಂದು ಹೇಳಿದ.

ತಂದೆಯವರಿಗೆ ಕಷ್ಟಕ್ಕಿಟ್ಟುಕೊಂಡಿತು. ಇರುವ ಒಬ್ಬನೇ ಮಗನನ್ನು ಕಳುಹಿಸಬೇಕಲ್ಲಾ ಎಂಬ ದುಃಖ ಆವರಿಸಿತು. ನಂಟರಿಷ್ಟರು 'ಎಲ್ಲಿಯಾದರೂ ಉಂಟೇ ?' ಎಂದು ಅಸಮ್ಮತಿ ಸೂಚಿಸಿದರು.

ತಂದೆಯವರು ಅಡ್ನೂರಿನ ಮಲ್ಲಿಕಾರ್ಜುನಗೌಡರಿಗೆ

"ಆಗಲಿ, ಇನ್ನೂ ಕೆಲವು ದಿನ ನೋಡಿ ಕಳುಹಿಸಿಕೊಡುತ್ತೇನೆ. ಈಗ ನೀವು ಊರಿಗೆ ಹೊರಡಬಹುದು"

ಎಂದು ಹೇಳಿದರು.

ಹತ್ತು ತಿಂಗಳು ಕಳೆದವು. ಚಂದ್ರಶೇಖರನಿಗೆ ಹತ್ತು ತುಂಬಿ ಹನ್ನೊಂದನೆಯ ವರ್ಷ ಆರಂಭವಾಯಿತು. ತಂದೆಯವರು ಮತ್ತೊಮ್ಮೆ ಚಂದ್ರಶೇಖರನನ್ನು ಹತ್ತಿರ ಕರೆದು

"ಏನಪ್ಪಾ, ಅಡ್ನೂರಿಗೆ ಹೋಗುತ್ತೀಯೇನು ?"

ಎಂದು ಕೇಳಿದರು. ಚಂದ್ರಶೇಖರ ತುಂಬಿದ ಉತ್ಸಾಹದಿಂದ 'ಆಗಬಹುದು' ಎಂದು ಹೇಳಿದ. ತಂದೆಯವರು ಮಗನ ಭವಿತವ್ಯವನ್ನು ವಿಚಾರ ಮಾಡಿ ತಮ್ಮ ವಿಶ್ವಾಸ ಅದಕ್ಕೆ ಮುಳುವಾಗಬಾರದೆಂದು ನಿರ್ಧರಿಸಿದರು. ಈ ಬಾರಿಗೆ ಬೇಡವೆಂದು ಹೇಳಿದ ನಂಟರಿಷ್ಟರ ಮಾತು ಕೇಳಲಿಲ್ಲ.

ಮಾರನೆಯ ಬೆಳಿಗ್ಗೆ ಮಗನನ್ನು ಎಬ್ಬಿಸಿ, ಅವನಿಗೆ ಸ್ನಾನ, ಪೂಜೆ, ಊಟಮಾಡಿಸಿ ಚಿಕ್ಕಪ್ಪನ ಜತೆಮಾಡಿ ಕಳಿಸಿಕೊಡಲು ಅಣಿಯಾದರು.

ಅಂದು ಮನೆಬಿಟ್ಟು ಹೋಗುತ್ತಿದ್ದ ಮಗ, ಅದೇ ಮನೆಗೆ ಅಪೂರ್ವಕೀರ್ತಿಯನ್ನು ಗಳಿಸುತ್ತಾನೆಂದು ತಂದೆಯವರ ಮನಸ್ಸಿಗೆ ಹೊಳೆದಿರಲಾರದು.

ಊರಿನಿಂದ ರೈಲ್ವೆ ಸ್ಟೇಷನ್ ಇದ್ದ ಅಳ್ನಾವರಕ್ಕೆ ನಡೆದುಹೋಗಬೇಕಾಗಿತ್ತು. ಚಂದ್ರಶೇಖರ ಚಿಕ್ಕಪ್ಪನೊಂದಿಗೆ ಎಂಟು ಮೈಲಿಗಳನ್ನೂ ಕಾಲ್ನಡಗೆಯಿಂದಲೇ ಸಾಗಿಸಿದ. ದೇಹಕ್ಕೆ ಶ್ರಮ ತೋರಿದ್ದರೂ ಮನಸ್ಸು ಪ್ರಫುಲ್ಲವಾಗಿತ್ತು. ತನ್ನ ಮುಂದಿದ್ದ ಬಾಳನ್ನಪ್ಪುವ ಕುತೂಹಲ, ತವಕ ಬಾಲಕನನ್ನು ಉತ್ಸಾಹಿಯನ್ನಾಗಿ ಮಾಡಿತ್ತು. ರೈಲನ್ನು ನೋಡಿದ ಕೂಡಲೆ ಚಂದ್ರಶೇಖರನ ಶ್ರಮವೆಲ್ಲಾ ಪರಿಹಾರವಾಯಿತು. ಮರುದಿನ ಮಧ್ಯಾನ್ಹ ರೈಲು ಅಣ್ಣಿಗೆರೆ ತಲುಪಿತು. ಚಂದ್ರಶೇಖರ ಮತ್ತು ಅವನ ಚಿಕ್ಕಪ್ಪ ಅಡ್ನೂರು ಗೌಡರ ಬಂಧುಗಳಾದ ಶ್ರೀಮಂತ ಬಳ್ಳೊಳ್ಳಿಯವರ ಮನೆಗೆ ಹೋದರು. ಅಲ್ಲಿ ಪೂಜೆ ಪ್ರಸಾದ ಮುಗಿಸಿಕೊಂಡು ಅಡ್ನೂರು ಸೇರಿದರು.

ಅಡ್ನೂರು ನವಿಲುಗುಂದ ತಾಲ್ಲೂಕಿನ ಒಂದು ಚಿಕ್ಕಹಳ್ಳಿ. ಮಲ್ಲಿಕಾರ್ಜುನ ಗೌಡರು ಆ ಊರಿನಲ್ಲಿ ದೊಡ್ಡ ಶ್ರೀಮಂತರು. ಚಿಕ್ಕಪ್ಪ ಕೆಲವು ದಿನ ಚಂದ್ರಶೇಖರನೊಂದಿಗೆ ಗೌಡರ ಮನೆಯಲ್ಲಿ ನಿಂತು ಊರಿಗೆ ಹೊರಡಲನುವಾದರು.

ಚಂದ್ರಶೇಖರನಿಗೆ ಶ್ರೀಮಂತರ ಮನೆಯ ವಾತಾವರಣ ಕೂಡಲೆ ಹೊಂದಿಕೆಯಾಗಲಿಲ್ಲ. ಎಲ್ಲರೂ ಹೊಸಬರು. ಅವರ ಆಚಾರ ವಿಚಾರಗಳು ಶ್ರೀಮಂತಿಕೆಯ ಹಿರಿಮೆಯಿಂದಲೇ ಕೂಡಿತ್ತು. ಆದರೆ ಕೆಲವೇ ದಿವಸಗಳಲ್ಲಿ ಅವನಿಗೆ ಇಬ್ಬರು ಜತೆಗಾರರು ದೊರೆತರು. ಅಡ್ನೂರು ಗೌಡರ ಅಕ್ಕನ ಮಕ್ಕಳಿಬ್ಬರು ತಬ್ಬಲಿಗಳಾಗಿ ಗೌಡರ ಆಶ್ರಯದಲ್ಲಿದ್ದರು. ಅವರಿಗೂ ಚಂದ್ರಶೇಖರನಿಗೂ ಸ್ನೇಹ ಕೂಡಿಬಂತು. ಅವನ ಬಾಳು ಹಗುರವಾಗಿ ಸುಖಪ್ರದವಾಯಿತು.

ಚಂದ್ರಶೇಖರನನ್ನು ಶಾಲೆಗೆ ಸೇರಿಸುವ ದಿನ ಬಂದಿತು. ಓದುಬಿಟ್ಟು ಒಂದು ವರ್ಷದ ಮೇಲಾಗಿತ್ತು. ಓದಿದ ಪಾಠ ಮರೆತುಹೋಗಿತ್ತು. ಪರೀಕ್ಷಕರು ಚಂದ್ರಶೇಖರನನ್ನು ಪರೀಕ್ಷಿಸಿ ನಾಲ್ಕನೆಯ ಕ್ಲಾಸಿಗೆ ಪ್ರವೇಶಕೊಟ್ಟರು. ಚಂದ್ರಶೇಖರನಿಗಾದ ಸಂತೋಷದಲ್ಲಿ ಅವನ ಓದು ನಾಗಾಲೋಟದಲ್ಲಿ ಸಾಗಿತು. ವರ್ಷದ ಪರೀಕ್ಷೆಯಲ್ಲಿ ತೇರ್ಗಡೆಯೂ ಆಯಿತು. ಐದನೆಯ

ಕ್ಲಾಸಿನಲ್ಲಿ ಓದಲಾರಂಭವಾಗಿ ಎರಡು ತಿಂಗಳು ಕಳೆದಿದ್ದಾಗ ಚಂದ್ರಶೇಖರನ ಭವಿಷ್ಯವನ್ನೇ ನಿರ್ಧರಿಸುವ ಒಂದು ಮಹತ್ವದ ಘಟನೆಯಾಯಿತು.

ಮಲ್ಲಿಕಾರ್ಜುನಗೌಡರು ಕಾರ್ಯಾರ್ಥಿಗಳಾಗಿ ಅಣ್ಣಿಗೆರೆಗೆ ಹೋಗಿದ್ದರು (೧೯೨೪). ಅದೇ ಕಾಲಕ್ಕೆ ಅಣ್ಣಿಗೆರೆಗೆ ಹಾನಗಲ್ಲ ಶ್ರೀ ಕುಮಾರಸ್ವಾಮಿಗಳವರು ದಯಮಾಡಿಸಿದ್ದರು. ಶ್ರೀಗಳವರ ದರ್ಶನ ಪಡೆಯಲು ಹೋದ ಗೌಡರು 'ನಮ್ಮೂರಿನ ಮಠಕ್ಕೆ ಅಧಿಕಾರಿಗಳನ್ನಾಗಿ ಮಾಡಲು ಒಬ್ಬ ವಟುವನ್ನು ಕರೆತಂದು ಓದಿಸುತ್ತಿದ್ದೇನೆ. ಆತನನ್ನು ಶಿವಯೋಗಮಂದಿರಕ್ಕೆ ವಿದ್ಯಾಭ್ಯಾಸಕ್ಕೆ ಕಳುಹಿಸಲು ಅಪ್ಪಣೆಯಾಗಬೇಕು' ಎಂದು ಕೇಳಿದರು. ಶ್ರೀಗಳವರು ವಟುವನ್ನು ನೋಡಬಯಸಲು, ಚಂದ್ರಶೇಖರನಿಗೆ ಕರೆಬಂದಿತು. ಶ್ರೀಗಳವರು ಚಂದ್ರಶೇಖರನನ್ನು ಪರೀಕ್ಷಿಸಿ ಅವನ ಬಲಗೈ ಹಿಡಿದು ನೋಡಿ 'ಪರವಾ ಇಲ್ಲ. ಬುದ್ಧಿ ಚೆನ್ನಾಗಿದೆ. ಆರೋಗ್ಯ ಮಾತ್ರ ಸಾಲದು. ಶಿವಯೋಗ ಮಂದಿರಕ್ಕೆ ಕಳುಹಿಸಿಕೊಡಿ' ಎಂದು ಅಪ್ಪಣೆನೀಡಿದರು. ಆಗ ಶ್ರೀಗಳವರಲ್ಲಿದ್ದ ಸಖರಾಯಪಟ್ಟಣದ ಶ್ರೀ ಸದಾಶಿವ ಶಿವಾಚಾರ್ಯರವರು ಶಿವಯೋಗಮಂದಿರಕ್ಕೆ ಹೊರಟಿದ್ದರು. ಅವರೊಂದಿಗೆ ಚಂದ್ರಶೇಖರನ ಪ್ರಯಾಣವೂ ಆಯಿತು. ಆ ವೇಳೆಗೆ ಅವನಿಗೆ ಹನ್ನೆರಡನೆಯ ವಯಸ್ಸು.

೨

ಕ್ರಿ. ಶ. ಆರು ಮತ್ತು ಏಳನೆಯ ಶತಮಾನಗಳಲ್ಲಿ ಜಗತ್ತನ್ನೇ ಮೂಬೆರಗಾಗಿ ಮಾಡಿದ ಬಾದಾಮಿ ಚಾಳುಕ್ಯರ ರಾಜಧಾನಿಯಾಗಿದ್ದ ಬಾದಾಮಿ ಇಂದು ಮುಂಬಯಿ ಪ್ರಾಂತ್ಯದ ಒಂದು ಸಣ್ಣ ತಾಲ್ಲೂಕು. ಗದುಗಿನಿಂದ ವಿಜಾಪುರಕ್ಕೆ ಹೋಗುವ ರೈಲುಮಾರ್ಗದಲ್ಲಿ ಬಾದಾಮಿಯ ರೈಲ್ವೆ ನಿಲ್ದಾಣ ಸಿಕ್ಕುತ್ತದೆ. ಬಾದಾಮಿಗೆ ನಾಲ್ಕುಮೈಲಿ ದೂರದಲ್ಲಿ ಪ್ರಸಿದ್ಧ ಬನಶಂಕರಿ ದೇವಾಲಯವಿದೆ. ದೇವಾಲಯಕ್ಕೆ ಐದುಮೈಲಿ ದೂರದಲ್ಲಿ 'ಶಿವಯೋಗಮಂದಿರ'ವೆಂಬ ಗುರುಕುಲವಿದೆ.

ಹಾನಗಲ್ಲು ಶ್ರೀ ಕುಮಾರಸ್ವಾಮಿಗಳು ೧೯೦೯ರಲ್ಲಿ ಶಿವಯೋಗಮಂದಿರವನ್ನು ಸ್ಥಾಪಿಸಿದರು. ಶಿವಯೋಗಮಂದಿರ ಸಾಧಕರ ಸ್ಥಾನವಾಗಿ, ವೀರಶೈವ

ಸಮಾಜಕ್ಕೆ ಯೋಗ್ಯರಾದ ಗುರುಗಳನ್ನು ಒದಗಿಸುವ ಕ್ಷೇತ್ರವಾಗಬೇಕೆಂಬುದು ಶ್ರೀಗಳವರ ಹೆಬ್ಬಯಕೆಯಾಗಿತ್ತು.

ಚಂದ್ರಶೇಖರದೇವರು ಶಿವಯೋಗಮಂದಿರ ಸೇರಿದಾಗ ಅದರ ಸ್ಥಿತಿಯನ್ನು ಈ ವರ್ಣನೆಯಿಂದ ತಿಳಿಯಬಹುದು,

"೧೯೨೫ನೆಯ ಸಾಲಿಗೆ ಶಿವಯೋಗಮಂದಿರವು ಹದಿನಾರನೆಯ ವರುಷ ದಲ್ಲಿ ಹೆಜ್ಜೆಯಿನ್ನಿಕ್ಕಿತ್ತು. ಏರುಂಜವ್ವನದ ಆರಂಭ ವಯಸ್ಸು. ಎಂಥವ ರನ್ನು ಬೆರಗುಗೊಳಿಸುವ ವರ್ಚಸ್ಸು. ಆಗ ಶಿವಯೋಗಮಂದಿರದಲ್ಲಿ ೩೦-೪೦ ಜನ ಚಿಕ್ಕ ಚಿಕ್ಕ ವಯಸ್ಸಿನ ವಟುಗಳು. ೭೦-೮೦ ಜನ ೧೨ ವರುಷಕ್ಕೆ ಮೀರಿದ ೩೫ ವರುಷಕ್ಕೆ ಮಿಂಚದ ಸಾಧಕ ಸಮುದಾಯವು. ಗುರು ವಿರಕ್ತ ರೆಂಬ ಭೇದಭಾವವಿಲ್ಲದೆ ಸಮರಸವಾಗಿದ್ದರು. ಮೇಲು ಕೀಳೆಂಬ ವೈಷಮ್ಯ ವಿಲ್ಲದೆ ವಾತ್ಸಲ್ಯದಿಂದಿದ್ದರು. ಚಿಕ್ಕ ವಟುಗಳು ಧರಿಸುವುದು ಬಿಳಿಯ ಕಪನಿ ಗಳು. ಸಾಧಕರು ಧರಿಸುವುದು ಕಾವಿಯ ಕಪನಿಗಳು. ನಿಲುವಂಗಿಗೆ ಕಪನಿಯೆಂದು ಅಲ್ಲಿ ಹೇಳುವ ವಾಡಿಕೆ. ಎಲ್ಲರೂ ಕೌಪೀನಧಾರಿಗಳು. ವಟುಗಳಿಗೆ ಕಿವಿಟೊಪ್ಪಿಗೆಗಳು. ಸಾಧಕರಿಗೆ ಮಸ್ತಕಪಾವುಡಗಳು. ಚೌಕ ವಸ್ತ್ರಗಳಿಗೆ ಮಸ್ತಕಪಾವುಡಗಳೆಂದು ಹೇಳಿಕೆ. ಇಷ್ಟು ಅಲ್ಲಿನವರ ಉಡುಪು ಗಳು. ಕನ್ನಡ ಸಂಸ್ಕೃತ ಇಂಗ್ಲಿಷಭಾಷೆಗಳಲ್ಲಿ ಅಧ್ಯಯನ ಸಾಗಿತ್ತು. ಇಬ್ಬರು ಸಂಸ್ಕೃತ ಶಿಕ್ಷಣಕೊಡುವ ಶಾಸ್ತ್ರಿಗಳು. ಇಬ್ಬರು ಇಂಗ್ಲಿಷ್ ಓದಿಸುವ ಶಿಕ್ಷಕರು. ಒಬ್ಬರು ಕನ್ನಡಾಧ್ಯಾಪಕರು. ಹೀಗೆ ಐದುಮಂದಿ ಶಿಕ್ಷಕರಿದ್ದರು. ಅಭ್ಯಾಸ ಅತ್ಯಂತ ಭರದಿಂದ ಸಾಗಿತ್ತು. ದಿನಾಚರಣೆ ಕ್ರಮವಿಡಿದು ನಡೆದಿತ್ತು.

ಪ್ರತಿ ದಿನ ಬೆಳಗಿನ ನಾಲ್ಕುವರೆ ಗಂಟೆಗೆ ಜಾಗಟೆಯ ಝಣಝಣಲ್ ಶಬ್ದವಾಗುತ್ತಿತ್ತು. ಸುಪ್ರಭಾತ ಸಮಯ. ಸುಪ್ರಸನ್ನ ವಾತಾವರಣ. ಆಗ ಎಲ್ಲರು ಶಿವನಾಮಸ್ಮರಣೆಯಿಂದ ಏಳುವುದು. ಎದ್ದೊಡನೆ ಒಂದೆಡೆಗೆ ಸೇರಿ ಹಾರ್ಮೋನಿಯಂ ಬಾಜಿಸುತ್ತ ಸುಶ್ರಾವ್ಯವಾಗಿ ಪ್ರಾರ್ಥನೆಯನೆಸಗುವುದು. ಬೆಳಗಾಗುವವರೆವಿಗು ಅವರವರ ಪಾಠ ಪ್ರವಚನಗಳನ್ನು ಪ್ರಶಾಂತ ಚಿತ್ತದಿಂದ ಓದುವುದು. ಅನಂತರ ಪ್ರಾತಃಶೌಚ ತೀರಿಸುವುದು. ಏಳು ಗಂಟೆಗೆ ಸರಿಯಾಗಿ ಮರಳಿ ಜಾಗಟೆ ಶಬ್ದವಾಗುತ್ತಿತ್ತು. ಎಲ್ಲರು ಸೇರಿ ಎಂಟು ಗಂಟೆಯವರೆವಿಗು ಆಸನಗಳನ್ನು ಹಾಕುವುದು. ಆಸನ ಹಾಕುವಲ್ಲಿ ಒಂದು

ವಿಶಿಷ್ಟ ಪದ್ಧತಿಯಿತ್ತು; ಸಕ್ರಮವಿತ್ತು. ಮಾತಿಗೆ ಅವಕಾಶವಿಲ್ಲ. ಮನದೃಷ್ಟಿಗಳ ಹರಿದಾಟವಿಲ್ಲ. ಸಂಧರ್ಭೋಚಿತನಾಗಿ ಊರ್ಧ್ವ, ಪೌರ್ಣಿಮ, ನಾಸಿಕಾಗ್ರ, ಅಮಾವಾಸ್ಯ ದೃಷ್ಟಿಗಳನ್ನಿಡಬೇಕು. ಧ್ಯಾನ ಅವ್ಯಾಹತವಾಗಿ ನಡೆದಿರಬೇಕು. ಅಂಗವೆಲ್ಲ ಆಸನಗಳಲ್ಲಿ ಅನುಷಂಗವಾಗಿರಬೇಕು. ಅಂತರಂಗ ಆತ್ಮಸಂಗವಾಗಿರಬೇಕು.

ಎಂಟು ಹತ್ತು ನಿಮಿಷಕ್ಕೆ ಪಾಠ ಪ್ರವಚನಗಳು ಪ್ರಾರಂಭವಾಗಿ ಹತ್ತು ಹತ್ತುವರೆಗೆ ಪೂರೈಸುವುದು. ಮುಂದೆ ಹನ್ನೆರಡು ಗಂಟೆಯವರೆವಿಗು ತೊರೆಯ ತಿಳಿ ನೀರಿನಲ್ಲಿ ಎಲ್ಲರು ಮಿಂಯುವುದು, ಮಡಿಯುಟ್ಟು ಮನವಿಟ್ಟು ಶಿವಪೂಜೆ-ಪಾದಪೂಜೆಗಳ ಮಾಡುವುದು; ಪಾದೋದಕ ಪ್ರಸಾದಗಳ ಕೊಂಬುವುದು. ಮಧ್ಯಾಹ್ನ ಒಂದು ಗಂಟೆ ವಿಶ್ರಾಂತಿ. ಒಂದು ಗಂಟೆ ಶಿವಾನುಭವ. ಎರಡು ಗಂಟೆಯಿಂದ ನಾಲ್ಕುವರೆ ವರೆವಿಗು ಪಾಠಗಳು. ಐದರವರೆವಿಗೆ ಸಾಯಂಶೌಚ. ಆರರವರೆವಿಗೆ ಪುರಾಣ ಶ್ರವಣ; ಭಜನೆ. ರಾತ್ರಿ ಎಂಟುವರೆ ವರೆವಿಗು ಮರಳಿ ಸ್ನಾನ ಶಿವಪೂಜಾದಿಗಳು. ಆ ಮೇಲೆ ಎಲ್ಲರೂ ಓದಿಕೊಂಡು ಹತ್ತು ಗಂಟೆಗೆ ದೇವ ಪ್ರಾರ್ಥನೆಮಾಡಿ ಮಲಗುವುದು ಇದು ಅಲ್ಲಿನ ಕಾರ್ಯಕ್ರಮ.

....ಎಲ್ಲರದು ಬಂದೇ ಸತ್ಕರ್ಮ; ಒಂದೇ ಸದ್ಧರ್ಮ, ಯಾವಾಗಲು ಎಲ್ಲರಿಗು ಒಂದೇ ಧ್ಯೇಯ; ಒಂದೇ ಶ್ರೇಯ. ಎಲ್ಲರು ಮನೆಮಾರು ಊರು ಕೇರಿ ಬಂದು ಬಳಗಗಳನ್ನು ಬಿಟ್ಟು ಸಂನ್ಯಾಸಕ್ಕೆ ಮೀಸಲಾದವರು. ಪೂರ್ವಾಶ್ರಮದ ಹಂಗನ್ನು ಹಳಚಿದವರು. ಜನ್ಮದಾತರಾದ ಜನನೀಜನಕರನ್ನು ನೋಡುವುದು ಒಂದೆಡೆಗಿರಲಿ ಹೆಸರುಗಳನ್ನು ಯಾರೂ ಹೇಳುವಂತಿಲ್ಲ. ಅರಿಯದವರು ಯಾರಾದರೂ ಕೇಳಿದರೆ ತಾಯಿ ಚಿಚ್ಛಕ್ತಿಯೆಂತಲು ತಂದೆ ಕುಮಾರಸ್ವಾಮಿಗಳೆಂತಲು ವಟುಗಳು ಹೇಳುವ ರೂಢಿಯಾಗಿತ್ತು. ಹಣ ತರಿಸುವಂತಿರಲಿಲ್ಲ; ಬಳಸುವಂತಿಲ್ಲ. ಪೂರ್ವಾಶ್ರಮ ನಿರಸನದೊಡನೆ ಪೂರ್ವಾಶ್ರಮ ನಿರಸನವು ಜಾರಿಯಲ್ಲಿ ಬರಬೇಕೆಂಬ ಬಯಕೆ. ಅದರಂತೆ ಅಲ್ಲಿಯ ನಡೆವಳಿಕೆ.

ಉಪ್ಪು ಹುಳಿ ಕಾರ-ಎಣ್ಣೆಗಳಿಲ್ಲದ ಸಪ್ಪೆ ಆಹಾರ. ಅವರೆ ಹುರುಳಿ ಕುಂಬಳಕಾಯಿ ಮುಳ್ಳುಗಾಯಿ ಜೋಳ ರಾಗಿ ಮುಂತಾದ ತಾಮಸಾಹಾರಗಳಿಗೆ ಅಲ್ಲಿ ಎಡೆಯಿಲ್ಲ. ಅಕ್ಕಿ ತೊಗರಿ ಹೆಸರು ಗೋಧಿ ಹಾಲು ತುಪ್ಪ

ಮುಂತಾದ ಸಾತ್ವಿಕಾಹಾರದ ಕಟ್ಟಿಗೆ ಎಲ್ಲರು ಒಳಪಟ್ಟಿರಬೇಕು. ಕೆಲವರ ಪೂರ್ವಾಶ್ರಮದ ಹೆಸರುಗಳು ಚೆನ್ನಾಗಿ ಇಲ್ಲದಿದ್ದರೆ ಅವನ್ನು ಬಿಟ್ಟು ಬೇರೆ ಹೆಸರುಗಳನ್ನು ಇಡುತ್ತಾರೆ. ಹೆಸರಿನ ಮುಂದೆ ಆರ್ಯ, ಆಚಾರ್ಯ, ದೇವ, ದೇಶಿಕ ಎಂಬ ಶ್ರೇಷ್ಠ ಸೂಚಕ ಶಬ್ದಗಳನ್ನು ಜೋಡಿಸುತ್ತಾರೆ. ಆಸನ ಅಭ್ಯಾಸ ಅನುಷ್ಠಾನ ಅನುಭವ ಇವು ಇಲ್ಲಿ ಕಲಿಯತಕ್ಕ ಮುಖ್ಯ ವಿಷಯಗಳು. ಇವನ್ನು ಎಲ್ಲರು ಅಭ್ಯಾಸಿಸಲು ಮನಃಪೂರ್ತಿಯಾಗಿ ಪ್ರಯತ್ನಿಸಬೇಕು. ಫಲಾಫಲ ಅವರವರ ಕರ್ತವ್ಯಕೋಟಿಗೆ ಸೇರಿದ್ದು. ಈ ರೀತಿ ಅಲ್ಲಿನ ಅಭ್ಯಾಸಗಳನ್ನು ಆಗು ಮಾಡಿಕೊಂಡವರು ಮಠಾಧಿಪತ್ಯವನ್ನು ವಹಿಸಿ ಧರ್ಮ ವಿದ್ಯೆ ಆಚಾರ ವಿಚಾರ ಪ್ರಚಾರ ಮಾಡುವುದು ಅವರ ಕರ್ತವ್ಯ. ಸಂಸ್ಥೆಯ ನೇಮ ನೀತಿಗಳಂತೆ ಇರುವುದೆ ಅವರಿಗೆ ವಾಸ್ತವ್ಯ."*

ಶಿವಯೋಗಮಂದಿರಕ್ಕೆ ಹೊಸದಾಗಿ ಬಂದವರು ಕೂಡಲೆ ವಟುಗಳ ಬಳಗಕ್ಕೆ ಸೇರುವಂತಿರಲಿಲ್ಲ. ಒಂದು ತಿಂಗಳು ದಾಸೋಹದಲ್ಲಿಯೋ ಇರಬೇಕು. ಚಂದ್ರಶೇಖರನಿಗೆ ಶಿವಯೋಗಮಂದಿರದ ಕಟ್ಟು ನಿಟ್ಟು, ಊಟ ಉಪಚಾರ, ವಾತಾವರಣ ಕಷ್ಟಕ್ಕಿಟ್ಟುಕೊಂಡಿತು. ತಿಂಗಳ ಅವಧಿ ಕಳೆದ ಮೇಲೆ ವಟುಗಳ ಬಳಗದಲ್ಲಿ ಎಡೆಸಿಕ್ಕಿತು. ಅಭ್ಯಾಸ, ಜತೆಗಾರರ ಸ್ನೇಹ ಸಹವಾಸದಿಂದ ಬೇಸರ ನೀಗಿತು. ಒಂದೆರಡು ವರ್ಷಗಳ ಇಂಗ್ಲಿಷ್ ಶಿಕ್ಷಣವಾದ ತರುವಾಯ ಸಂಸ್ಕೃತಾಭ್ಯಾಸ ಆರಂಭವಾಯಿತು.

ಕೆಲವು ದಿನಗಳು ಕಳೆದ ತರುವಾಯ ಲಿಂಗೈಕ್ಯ ಶ್ರೀ ಬಿದರೆ ಪಟ್ಟಾಧ್ಯರವರಿಂದ ಚಂದ್ರಶೇಖರನಿಗೆ ದೀಕ್ಷೆಯಾಯಿತು. ಕಾವಿ ಬಟ್ಟೆ ಧರಿಸುವುದು ಆರಂಭವಾಯಿತು.

## ೩

ಹನ್ನೆರಡು ವರ್ಷಕಾಲ ಶಿವಯೋಗಮಂದಿರದ ಕಠಿಣ ನಿಯಮ ನಿಬಂಧನೆಗಳಿಗೊಳಗಾಗಿ ಅಭ್ಯಾಸ ಸಾಗಿತು. ಈ ಅವಧಿಯಲ್ಲಿ ವಾಚನಾಲಯ,

---

* ಕಾರಣಿಕ ಕುಮಾರಯೋಗಿ: ಶ್ರೀ ಜ. ಪ. ಚನ್ನಬಸವರಾಜದೇಶಿಕೇಂದ್ರ ಸ್ವಾಮಿಗಳು: ಪುಟ ೭೪.

ಗ್ರಂಥಾಲಯಗಳ ಕಾರ್ಯದರ್ಶಿತ್ವವೂ ಪ್ರಾಪ್ತವಾಯಿತು. ಕೆಳಗಿನ ವರ್ಗ ದವರಿಗೆ ಪಾಠ ಹೇಳಬೇಕಾಗಿತ್ತು. ಇಷ್ಟೆಲ್ಲ ಚಟುವಟಿಕೆಯಿದ್ದರೂ ಅಭ್ಯಾಸ ವನ್ನು ದುರ್ಲಕ್ಷಿಸದೆ ಚಂದ್ರಶೇಖರದೇವರು ಕಲ್ಕತ್ತಾ ವಿಶ್ವವಿದ್ಯಾನಿಲಯದ ಸಾಹಿತ್ಯ, ವ್ಯಾಕರಣ, ಸಾಂಖ್ಯ, ವೇದಾಂತ ಶಾಸ್ತ್ರಗಳ ಪರೀಕ್ಷೆಗೆ ಕುಳಿತು ಉತ್ತೀರ್ಣರಾದರು. ಕಾಳಿದಾಸ ಮಹಾಕವಿಯ 'ಮಾಲವಕಾಗ್ನಿಮಿತ್ರ' ನಾಟಕವನ್ನು ಕನ್ನಡಿಸಿದರು. 'ಸುಕುಮಾರ' ಎಂಬ ಕೈ ಬರೆಹದ ಮಾಸ ಪತ್ರಿಕೆಯ ಸಂಪಾದಕಮಂಡಳಿಯಲ್ಲಿ ಸೇರಿ ಆ ಪತ್ರಿಕೆಗೆ ಉತ್ತಮ ಲೇಖನ ಗಳನ್ನು ಬರೆಯುತ್ತಿದ್ದರು.

'ಸುಕುಮಾರ' ಪತ್ರಿಕೆಯಲ್ಲಿ ಆಕಾಲಕ್ಕೆ ಚಂದ್ರಶೇಖರದೇವರು ಬರೆ ದಿರುವ 'ತಿಳಿನುಡಿಗಳು' ಎಂಬ ಸೂಕ್ತಿಗಳಿಂದ ಅವರ ವಿಚಾರವಾಹಿನಿಯ ಪರಿಚಯ ನಮಗಾಗುತ್ತದೆ. ಮುಂದೆ ನುರಿತ ವಚನಕಾರರಾಗಲಿದ್ದ ಇವರ ಶೈಲಿ ಯಾವ ರೀತಿ ರೂಪುಗೊಳ್ಳುತ್ತಿತ್ತೆನ್ನುವುದಕ್ಕೆ ಈ ತಿಳಿನುಡಿಗಳು ಸಾಕ್ಷ್ಯ ವನ್ನೊದಗಿಸುತ್ತವೆ.

"ಅನಂತ ಔಷಧಗಳನ್ನು ತಿಂದು ತಣ್ಣಗಾಗುವದಕ್ಕಿಂತ, ಆರೋಗ್ಯ ಭಾಗ್ಯಕೊಡುವ ನಿಯತ ವ್ಯಾಯಾಮವು ಒಳ್ಳೆಯದು."

---

"ಪಾಪಕ್ಷಯವಾಗಲೆಂದು ಅಕ್ಷಯ ಪುಣ್ಯಗಳಿಕೆಗೆ ಅನೇಕ ತೀರ್ಥ ಯಾತ್ರೆಗಳನ್ನು ಮಾಡುವುದಕ್ಕಿಂತ ಒಮ್ಮೆ ಶಿವಶರಣರಿಗೆ ಶರಣೆನ್ನುವುದು ಮೇಲು."

---

"ವಿದ್ಯ ಕಲಿಯಲು ಬುದ್ಧಿಯು, ಯಜ್ಞಮಾಡಲು ಸಂಪದವು ಕಾರಣ ವಾದಂತೆ ದೇವದರ್ಶನವಾಗಲು ಭಕ್ತಿಯು ಬೇಕು."

---

"ಗಿಡವು ಗಟ್ಟಿಯಾಗಿ ನಿಲ್ಲಲು ಬೇರು, ಮನುಜನು ಸಶಕ್ತನಾಗಲು ಅನ್ನ ಅವಶ್ಯವಿದ್ದಂತೆ, ಜಗತ್ತು ನಾಲ್ಕೊಪ್ಪತ್ತು ನಿಲ್ಲಲು ಧರ್ಮವು ಮೂಲ ವಾದುದು."

---

"ಮರದ ನೆರಳು, ನೀರಗುರಳಿಯು ಅಸ್ಥಿರವಾದಂತೆ, ನಮ್ಮ ಜೀವನ ಸುಖಸಂಪದವು ಅನಿತ್ಯವಾದುದು."

---

"ಬೆಳಗಿನಲ್ಲಿ ಮರದ ಹಕ್ಕಿಗಳು, ಸಂಜೆಯಲ್ಲಿ ಸಂತೆಯ ಜನಗಳು, ಹರಿದು ಹಂಚಿಹೋಗುವಂತೆ ನಾವು ಬಡವರಾದರೆ ನಮ್ಮ ಬಂಧುಗಳು ನಮ್ಮನ್ನು ಬಿಡುವುದು ಸಹಜ."

---

"ಬೇಸಿಗೆಯ ಬಿಸಿಲಿನಿಂದ ಬತ್ತಿನಿಂತ ಹೊಳೆ ಹಳ್ಳ, ಕೆರೆ ಭಾವಿಗಳು ಮೇಘವರ್ಷಣದಿಂದ ತುಂಬಿ ತುಳುಕುವಂತೆ, ಅಜ್ಞಾನ ಅನಾಚಾರಗಳಿಂದ ಒಣಗಿನಿಂತ ಮುಮುಕ್ಷುಗಳ ಹೃದಯ ಝರಿಗಳು ಸದ್ಗುರುವಿನ ಭಾವೋದ್ರೇಕ ಬೋಧಾಮೃತದಿಂದ ಸಂಪೂರ್ಣ ತುಂಬಿ ಸೂಸುತ್ತವೆ."

---

"ಜ್ಯೋತಿಯು ಕತ್ತಲೆಯನ್ನು ಕತ್ತರಿಸುವುದು, ಗಾಳಿಯು ಮೇಘಗಳನ್ನು ಚದುರಿಸುವುದು, ಜ್ಞಾನವು ಅಜ್ಞಾನವನ್ನು ಓಡಿಸುವುದು."

---

"ನದಿಯು ಸಾಗರವನ್ನೂ ಬಳ್ಳಿಯು ಗಿಡವನ್ನೂ ಆಶ್ರಯಿಸಿರುವಂತೆ ಧರ್ಮವು ದಯೆಯನ್ನು ಆಶ್ರಯಿಸಿರುವುದು." *

---

ಚಂದ್ರಶೇಖರದೇವರು ಶಿವಯೋಗಮಂದಿರವನ್ನು ಬಿಡುವ ಕಾಲ ಬಂದಿತು. ೧೯೩೫ರಲ್ಲಿ ಪರೀಕ್ಷೆಗಳ ವಿಷಯದಲ್ಲಿ ಇವರಿಗೂ ಪರೀಕ್ಷಕರಿಗೂ ಭಿನ್ನಾಭಿಪ್ರಾಯಗಳುಂಟಾಗಿ, ಚಂದ್ರಶೇಖರದೇವರು ಆಗ ಶಿವಯೋಗ ಮಂದಿರದ ಅಧ್ಯಕ್ಷರಾಗಿದ್ದ ಹುಬ್ಬಳ್ಳಿಯ ಮೂರುಸಾವಿರ ಮಠದ ಜಗದ್ಗುರುಗಳ ನಿರೂಪಪಡೆದು ಅಲ್ಲಿಂದ ಹೊರಟರು.

ಚಂದ್ರಶೇಖರದೇವರು ಅಡ್ನೂರು ಬಿಟ್ಟು ೧೩-೧೪ ವರ್ಷಗಳಾಗಿದ್ದವು. ನೇರವಾಗಿ ಶಿವಯೋಗಮಂದಿರದಿಂದ ಊರಿಗೆ ಹೋದರು. ಊರಿನವರು,

---

* ಸುಕುಮಾರ: ಸಂಪುಟ ೩, ಸಂಚಿಕೆ ೧. (೧೯೨೫) ಸಂಪಾದಕರು ಶ್ರೀ ಬಸವಲಿಂಗದೇಶಿಕರು. ಶಿವಯೋಗಮಂದಿರ.

ಬಂಧುಬಾಂಧವರು ವಿದ್ವದ್ವಿಭೂಷಿತನಾಗಿ ಹಿಂದಿರುಗಿದ ತಮ್ಮ ಚಂದ್ರಶೇಖ ನಿಗೆ ಸುಸ್ವಾಗತ ಬಯಸಿದರು. ದನಕಾಯುವ ಕಾಯಕ ಮಾಡುತ್ತಿದ್ದ ತಮ್ಮ ಹಳ್ಳಿಯ ಹುಡುಗ ಜನಕಾಯುವ ಕಾಯಕ ಕೈಗೊಂಡಿದ್ದುದನ್ನು ಕಂಡ ಎಲ್ಲರೂ ಸಂತೋಷಿಸಿದರು. ಊರಿನಲ್ಲಿಯೇ ನಿಂತ ಚಂದ್ರಶೇಖರದೇವ ವಿಜಾಪುರದ 'ಶಿವಾನುಭವ' ಪತ್ರಿಕೆಗೆ 'ಮಹದೇವಿಯಕ್ಕಗಳು ಮದು ಯಾಗಿರುವರೆ?' ಎಂಬ ಶೀರ್ಷಿಕೆಯಲ್ಲಿ ಕೆಲವು ಲೇಖನಗಳನ್ನು ಬರೆ ಮಹಾದೇವಿಗೆ ಮದುವೆಯಾಗಿರಲಿಲ್ಲವೆಂದು ಸ್ಥಾಪಿಸಲೆತ್ನಿಸಿದರು.

ತಮ್ಮ ಚಂದ್ರಶೇಖರನ ಭಾಷಣ ಕೇಳಬೇಕೆಂದು ಊರಿನವ ಉತ್ಸಾಹ ಹುಟ್ಟಿತು. ಪಟೇಲರು ಚಂದ್ರಶೇಖರದೇವರನ್ನೊಪ್ಪಿಸಿ ಊ ಆಂಜನೇಯಗುಡಿಯಲ್ಲಿ ಭಾಷಣದ ವ್ಯವಸ್ಥೆಮಾಡಿದರು. ಸಾರ್ವಜನಿ ಸಭೆಗಳಲ್ಲಿ ಭಾಷಣಮಾಡಿ ಚಂದ್ರಶೇಖರದೇವರಿಗೆ ಅಭ್ಯಾಸವಿರಲಿಲ್ಲ ಭಾಷಣವೂ ಆಯಿತು. ಊರಿನವರು ಸಂತೋಷಿಸಿ ಭಾಷಣವನ್ನು ಪ್ರಶಂಸಿದರು.

ಹನ್ನೆರಡು ವರ್ಷಗಳ ಸತತಾಭ್ಯಾಸ, ಅಲ್ಪಾಹಾರಗಳಿಂದ ಶೋಷಿ ವಾಗಿದ್ದ ಚಂದ್ರಶೇಖರದೇವರ ದೇಹ ಸತ್ಯಾಗ್ರಹ ಹೂಡಿತು. ಬೆಳಗಾಂವಿ ಚಿಕಿತ್ಸೆಗಾಗಿ ಹೋಗಿ ಬಂದುದಾಯಿತು. ವೃಥಾ ಕಾಲ, ಧನ ವ್ಯರ್ಥವಾ ತಲ್ಲದೆ ಚಂದ್ರಶೇಖರದೇವರಿಗೆ ಯಾವ ಗುಣವೂ ಕಂಡೂ ಬರಲಿಲ್ಲ. ಒಂ ವರ್ಷ ನಿರರ್ಥಕವಾಗಿ ಕಳೆದುಹೋಗಿತ್ತು. ಚಂದ್ರಶೇಖರದೇವರಿಗೆ ಓ ಮುಂದುವರಿಸುವ ಆಕಾಂಕ್ಷೆ ತಪ್ಪಿರಲಿಲ್ಲ. ಅಡ್ನೂರು, ಹ್ಯಾವಗಲ್ಲಿನಲ್ಲಿ ಸ್ವಲ್ಪ ಹಣ ಸಂಗ್ರಹಿಸಲಾಯಿತು.

ಮುಂದೆ ಸಂಸ್ಕೃತ ಅಭ್ಯಾಸಮಾಡಲು ಕಾಶಿಗೆ ಹೋಗಬೇಕೇ, ಕನ್ನ ಅಭ್ಯಾಸಮಾಡಲು ಬೆಂಗಳೂರಿಗೆ ಹೋಗಬೇಕೇ ಎಂಬ ಪ್ರಶ್ನೆಯೆದ್ದಿತು ಹುಬ್ಬಳ್ಳಿಯಲ್ಲಿದ್ದ ಸಹಪಾಠಿಗಳಾದ ಸಿದ್ಧವೀರದೇವರಲ್ಲಿಗೆ ಬಂದು ಸಲಹೆ ಕೇ ಲಾಗಿ ಅವರು ಕನ್ನಡದ ಪರವಾಗಿ ತಮ್ಮ ಮತವನ್ನಿತ್ತರು. ಇಬ್ಬರೂ ಕೂಡಿ ಬೆಂಗಳೂರಿಗೆ ಹೋಗುವುದೆಂದು ನಿರ್ಧಾರವಾದರೂ ಕಾರಣಾಂತ ಗಳಿಂದ ಸಿದ್ಧವೀರದೇವರು ಹೊರಡಲಾಗಲಿಲ್ಲ. ಚಂದ್ರಶೇಖರದೇವರೊಬ್ಬರೇ ನವಿಲುಗುಂದದ ಶ್ರೀ ಬಸವಲಿಂಗದೇಶಿಕರ ಪರಿಚಯಪತ್ರದೊಡನೆ

ಬೆಂಗಳೂರಿಗೆ ಹೊರಟರು. ಮಧ್ಯೆ ಅಜ್ಜಂಪುರದಲ್ಲಿಳಿದು ಗಿರಿಯಾಪುರದ ಶ್ರೀ ಗುರುಕುಮಾರಾಶ್ರಮಕ್ಕೆ ಹೋಗಿ ಶ್ರೀ ಸದಾಶಿವ ಶಿವಾಚಾರ್ಯರ ಆಶೀರ್ವಾದ ಪಡೆದು ೧೯೩೭ನೆಯ ಇಸವಿ ಜುಲೈ ತಿಂಗಳು ಗುರುವಾರ ಚಂದ್ರಶೇಖರ ದೇವರು ಬೆಂಗಳೂರು ತಲುಪಿದರು. ರೈಲ್ವೆನಿಲ್ದಾಣದ ಸಮೀಪದಲ್ಲಿರುವ ಗುಬ್ಬಿ ತೋಟದಪ್ಪನವರ ಛತ್ರದಲ್ಲಿ ಬೀಡು ಬಿಟ್ಟದ ನೌಲೂರು ಪಟ್ಟಾಧ್ಯಕ್ಷ ರಲ್ಲಿ ನಿಂತುದಾಯಿತು. ಛತ್ರದ ವಿದ್ಯಾರ್ಥಿನಿಲಯದಲ್ಲಿ ಆಶ್ರಯ ಪಡೆಯುವ ಪ್ರಯತ್ನವನ್ನು ಚಂದ್ರಶೇಖರದೇವರು ಮಾಡಿದರು. ಮೈಸೂರು ಸಂಸ್ಥಾನದ ಹೊರಗಿನ ವಿದ್ಯಾರ್ಥಿಗಳಿಗೆ ಛತ್ರದ ವಿದ್ಯಾರ್ಥಿನಿಲಯದಲ್ಲಿ ಆಶ್ರಯಕೊಡಲು ಸಾಧ್ಯವಿಲ್ಲವೆಂದು ಅಧಿಕಾರಿಗಳು ತಿಳಿಸಿದರು. ಅಲ್ಲಿಯೇ ನಾಲ್ಕಾರು ದಿನ ಕಳೆದು ಶ್ರೀ ಸರ್ಪಭೂಷಣ ಮಠಕ್ಕೆ ಬಂದರು. ಶ್ರೀ ಮಹಾದೇವಸ್ವಾಮಿ ಗಳವರು ಪ್ರವಾಸದಲ್ಲಿದ್ದರು. ಅವರು ಬರುವವರೆಗೆ ೧೦-೧೫ ದಿವಸಗಳು ಅಲ್ಲಿಯೇ ಕಾದು ಶ್ರೀ ನವಿಲುಗುಂದದ ಶ್ರೀಗಳವರ ಪರಿಚಯಪತ್ರ ಕೊಡಲು ಶ್ರೀ ಮಹಾದೇವ ಸ್ವಾಮಿಗಳವರು ಚಂದ್ರಶೇಖರದೇವರಿಗೆ ತಮ್ಮ ಮಠದಲ್ಲಿ ಆಶ್ರಯವಿತ್ತರು. ೧೯೩೯ ಜೂನ್ ತಿಂಗಳವರೆಗೆ ಸರ್ಪಭೂಷಣ ಮಠದಲ್ಲಿಯೇ ಚಂದ್ರಶೇಖರದೇವರು ನಿಂತು ತಮ್ಮ ವ್ಯಾಸಂಗ ಮುಂದುವರಿಸಿದರು.

ಕನ್ನಡದ ಉಚ್ಚಶಿಕ್ಷಣ ಪಡೆಯಲು ಕನ್ನಡ ಸಾಹಿತ್ಯಪರಿಷತ್ತಿನಲ್ಲಿ ಯಾವ ವ್ಯವಸ್ಥೆಯೂ ಇರಲಿಲ್ಲ. ಬೆಂಗಳೂರಿನ ಸಂಸ್ಕೃತಕಾಲೇಜಿನ ವಿದ್ವಾನ್ ಪರೀಕ್ಷೆಗೆ ಕುಳಿತುಕೊಳ್ಳಲು ಚಂದ್ರಶೇಖರದೇವರು ಪ್ರಯತ್ನಿಸಿದರು. ಸಾಧ್ಯವಾಗಲಿಲ್ಲ. ಮದ್ರಾಸ್ ವಿಶ್ವವಿದ್ಯಾನಿಲಯದ ಕನ್ನಡ ವಿದ್ವಾನ್ ಪರೀಕ್ಷೆಗೆ ಕೂಡಲು ನಿಶ್ಚಯಿಸಿದರು. ಈ ಎರಡು ವರ್ಷಗಳು ಚಂದ್ರಶೇಖರ ದೇವರ ಲೇಖನ ಅವ್ಯಾಹತವಾಗಿ ಸಾಗಿತು. ಅಕ್ಕಮಹಾದೇವಿ, ಹರಿಹರ, ಗುಬ್ಬಿಮಲ್ಲಣಾರ್ಯ ಮೊದಲಾದ ಕವಿಗಳ ಕಾವ್ಯವಿಮರ್ಶೆ ಬರೆದು 'ಶಿವಾನುಭವ'ದಲ್ಲಿ ಪ್ರಕಟಿಸಿದರು. ವಿವಿಧ ವಿಷಯಗಳಮೇಲೆ 'ಶರಣ ಸಾಹಿತ್ಯ'ಕ್ಕೆ ಲೇಖನಗಳನ್ನು ಬರೆದರು. ಸಾಹಿತ್ಯಪರಿಷತ್ತಿನಿಂದ ಹೊರಡು ತ್ತಿದ್ದ 'ಕನ್ನಡ ನುಡಿ' ವಾರಪತ್ರಿಕೆಗೆ ಕೆಲವು ಆಧುನಿಕ ಸಾಹಿತಿಗಳ ಪರಿಚಯಾತ್ಮಕ ಲೇಖನಗಳನ್ನು ಬರೆದರು.

೧೯೩೭ರಲ್ಲಿ ಚಂದ್ರಶೇಖರದೇವರ ಮೊದಲಿನ ಗ್ರಂಥಗಳು 'ಅಕ್ಕನ ಬಾಳು', 'ಅಕ್ಕನ ಲಾವಣಿ' ಪ್ರಕಟವಾದವು. ಅದೇ ವರ್ಷವೇ ಅಕ್ಕನ ಬಳಗದವರು ಉಚಿತವಾಗಿ ಹಂಚುವುದಕ್ಕೆ ಮಹಾದೇವಿಯಕ್ಕನ ಚಿಕ್ಕ ವಚನ ಸಂಗ್ರಹ 'ಅಕ್ಕನ ಅಮೃತವಾಣಿ' ಸಿದ್ಧಮಾಡಿಕೊಟ್ಟರು. ಇದುವರೆವಿಗೆ ಬೆಳಕು ಕಾಣದಿದ್ದ ಮಹಾದೇವಿಯಕ್ಕನ 'ಯೋಗಾಂಗ ತ್ರಿವಿಧಿ' ಗ್ರಂಥವನ್ನು ಪರಿಷ್ಕರಿಸಿ ಪ್ರಕಟಿಸಿದರು.

ಕನ್ನಡ ಋಷಿಕವಿಯಾದ ಮುಪ್ಪಿನ ಷಡಕ್ಷರಿಯ 'ಕೈವಲ್ಯ'ವನ್ನು ಹಲವು ಪ್ರತಿಗಳ ಸಹಾಯದಿಂದ ಶೋಧಿಸಿ ಶುದ್ಧಗೊಳಿಸಿ ಸಮಾನಾರ್ಥದ ವಚನಗಳನ್ನು ಜೋಡಿಸಿ ಸಂಗ್ರಹಿಸಿದರು. ಈ ಗ್ರಂಥವನ್ನೇ ಶ್ರೀ ಹರ್ಡೇಕರ್ ಮಂಜಪ್ಪನವರು ೧೯೪೦ರಲ್ಲಿ 'ಸುಬೋಧಸಾರ' ಎಂಬ ಹೆಸರಿನಿಂದ ಪ್ರಕಟಿಸಿ ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬದ ಕಾಣಿಕೆಯಾಗಿ ಮೈಸೂರು ಶ್ರೀಮನ್ಮಹಾರಾಜರವರಾದ ನಾಲ್ಮಡಿ ಶ್ರೀ ಕೃಷ್ಣರಾಜ ಒಡೆಯರವರು ಉತ್ಸವವನ್ನು ಆರಂಭಗೊಳಿಸಿದ್ದರ ನೆನಪಿಗಾಗಿ ಕನ್ನಡಮ್ಮನ ಪಾದಕ್ಕೆ ಕಾಣಿಕೆಯಾಗಿ ಅರ್ಪಿಸಿದರು.

ಚಂದ್ರಶೇಖರದೇವರಿಗೆ ಅವರ ಜೀವನಪಥ ಸ್ಪಷ್ಟವಾಗುತ್ತ ಬಂದಿತು. 'ಅಕ್ಕನ ಬಾಳು' ಗ್ರಂಥದಲ್ಲಿ ಅವರು ಬಳಸಿದ ಕಾವ್ಯಮಯ ಗದ್ಯಶೈಲಿ ಬಹಳ ಜನ ವಿದ್ವಾಂಸರ ಮೆಚ್ಚುಗೆಯನ್ನು ತಂದಿತು. 'ಯೋಗಾಂಗ ತ್ರಿವಿಧಿ' ಮತ್ತು 'ಸುಬೋಧ ಸಾರ' ಪರಿಷ್ಕರಣಗಳಲ್ಲಿ ಅವರು ತೋರಿದ ನಿಷ್ಪಕ್ಷಪಾತ ದೃಷ್ಟಿ, ವಿಮರ್ಶನಾನೈಪುಣ್ಯ ಪಂಡಿತರ ಮನಸ್ಸಿಗೆ ಮೆಚ್ಚುಗೆಯಾಯಿತು. ಚಂದ್ರಶೇಖರದೇವರ ಕಾವ್ಯಪರಿಣತಮತಿ ಪಕ್ವವಾಗುವುದನ್ನು ಕನ್ನಡಜನ ವಿಶ್ವಾಸ, ಕುತೂಹಲಗಳಿಂದ ನೋಡತೊಡಗಿದರು.

೪

ಬಾಗೇಪಲ್ಲಿ ತಾಲ್ಲೂಕು ಗೂಳೂರಿನಲ್ಲಿದ್ದ ಪಂಡಿತಾರಾಧ್ಯಪರಂಪರೆಯ ಪೀಠಕ್ಕೆ ಪೀಠಾಧಿಕಾರಿಗಳನ್ನು ಆಯಬೇಕಾಗಿತ್ತು. ಈ ಪೀಠದ ಸೂರ್ಯ ಸಿಂಹಾಸನಾರೋಹಣವನ್ನು ಕ್ರಿ. ಶ. ೧೯೦೩ರಲ್ಲಿ ಶ್ರೀ ಜಗದ್ಗುರು ಮರಿ ಕರಿಬಸವರಾಜ ದೇಶಿಕೇಂದ್ರ ಶಿವಾಚಾರ್ಯರವರು ಮಾಡಿ ಮೂವತ್ತುನಾಲ್ಕು

ವರ್ಷ ಪೀಠದ ಅಧಿಕಾರ ಆಡಳಿತ ನಡೆಸಿ ೧೯೩೭ರಲ್ಲಿ ಲಿಂಗೈಕ್ಯರಾದರು. ಈ ಅವಧಿಯಲ್ಲಿ ಮಠದ ವಿಪುಲವಾದ ಚರಾಸ್ತಿಯೆಲ್ಲ ಹೋಗಿ ಸ್ಥಿರಾಸ್ತಿಮಾತ್ರ ಉಳಿದಿತ್ತು. ಆಗ ಮೈಸೂರು ಸರ್ಕಾರದವರು ಧರ್ಮಸಂಸ್ಥೆಗಳ ಕಾನೂನು ಅನುಸರಿಸಿ ಈ ಪೀಠದ ಆಡಳಿತವನ್ನು ತಾವೇ ವಹಿಸಿಕೊಂಡು ತಮ್ಮ ಸಹಾಯಕ್ಕೆ ಒಂದು ಸಲಹಾಸಮಿತಿ (Advisory Committee) ನೇಮಿಸಿಕೊಂಡರು. ಈ ಸಮಿತಿಯಲ್ಲಿ ಬೆಂಗಳೂರಿನ ಶ್ರೀ ಎಂ. ನಾಗಪ್ಪನವರೂ, ಶ್ರೀ ಯಜಮಾನ್ ಮಾದಪ್ಪನವರೂ, ಶಿಡ್ಲಘಟ್ಟದ ಶ್ರೀ ಹಂಪಯ್ಯನವರೂ ಇದ್ದರು. ಇವರುಗಳ ನೇತೃತ್ವದಲ್ಲಿ ಎರಡುವರ್ಷ ಪೀಠದ ವ್ಯವಸ್ಥೆ ನಡೆಯಿತು. ಪೀಠಕ್ಕೆ ಉತ್ತರಾಧಿಕಾರಿಗಳನ್ನು ಆಯ್ದುಕೊಡಲು ಸಮಿತಿಯವರು ಸರ್ಕಾರದವರನ್ನು ಕೇಳಿಕೊಂಡರು. ಕೆಲವು ಹೆಸರುಗಳು ಸೂಚಿಸಲ್ಪಟ್ಟವು. ಅವುಗಳಲ್ಲಿ ಅಡ್ನೂರಿನ ಚಂದ್ರಶೇಖರದೇವರ ಹೆಸರೂ ಒಂದಾಗಿತ್ತು.

ಪೀಠಾಧಿಕಾರಿಗಳನ್ನು ಆರಿಸುವ ಉತ್ತರವಾದಿತನ ಕೋಲಾರ ಜಿಲ್ಲಾಧಿಕಾರಿಗಳಾದ ಶ್ರೀ ಜಿ. ಸುಂದರರಾಯರಮೇಲೆ ಬಿತ್ತು. ಶ್ರೀ ಸುಂದರರಾಯರು ಖಂಡಿತವಾದಿಗಳೂ, ಬಹು ದಕ್ಷರೂ ಆದ ಅಧಿಕಾರಿಗಳೆಂದು ಹೆಸರಾಗಿದ್ದುದಲ್ಲದೆ ಘನ ಪಂಡಿತರೂ ಆಗಿದ್ದಾರೆ. ಚಂದ್ರಶೇಖರದೇವರನ್ನೂ ಇತರರನ್ನೂ ತಮ್ಮಲ್ಲಿಗೆ ಬರಮಾಡಿಕೊಂಡು ಅವರೆಲ್ಲರ ವಿದ್ಯೆ, ಪಾಂಡಿತ್ಯ, ಶೀಲವನ್ನು ಕೂಲಂಕಷವಾಗಿ ಪರೀಕ್ಷಿಸಿ ಚಂದ್ರಶೇಖರದೇವರು ಈ ಸ್ಥಾನಕ್ಕೆ ಸರ್ವರೀತಿಯಿಂದಲೂ ಅರ್ಹರೆಂದು ಸರ್ಕಾರಕ್ಕೆ ವಿನಂತಿಸಿದರು. ಸುಂದರರಾಯರ ಸಲಹೆಗೆ ಸರ್ಕಾರದ ಅನುಮೋದನೆಯೂ ಸಿಕ್ಕಿತು.

ಪಟ್ಟಾಧಿಕಾರ ಮಹೋತ್ಸವ ಜೂನ್ ೧೨, ೧೯೩೯ ಎಂದು ನಿಶ್ಚಯವಾಯಿತು. ಉತ್ಸವದ ಒಂದೆರಡು ದಿನ ಮೊದಲು ಚಂದ್ರಶೇಖರದೇವರು ಬೆಂಗಳೂರಿಗೆ ಬಂದು ನಿಡುಮಾಮಿಡಿಗೆ ಹೋದರು. ಮಠದ ಪರಿಸ್ಥಿತಿ ನೋಡಿ ಅವರಿಗೆ ದುಃಖವೂ ಭಯವೂ ಆಯಿತು. ಶಿಥಿಲವಾದ ಸ್ಥಿತಿಯಿಲ್ಲದ ಮಠ. ಪರಿಚಯವಿಲ್ಲದ ಪ್ರಾಂತ್ಯ. ಮಠದ ಒಳಹೊಕ್ಕರೆ – ಹಾಳು ದೇಗುಲದಂತಿದೆ. ಅದು ಸುಣ್ಣ ಬಣ್ಣ ರಿಪೇರಿ ಕಂಡು ಯಾವ ಯುಗವಾಯಿತೋ? ಈ ಮಠವನ್ನು ನೋಡದೆ ಏಕೆ

ಒಪ್ಪಿಕೊಂಡೆ ಎಂದು ಚಂದ್ರಶೇಖರದೇವರು ವಿಚಾರ ಮಾಡಿದರು. ಮುಂದಿಟ್ಟ ಅಡಿಯನ್ನು ಹಿಂದಕ್ಕೆ ತೆಗೆಯಬಾರದೆಂಬ ನಿರ್ಧಾರ ಚಂದ್ರಶೇಖರದೇವರ ಮನಸ್ಸಿನಲ್ಲಿ ಮೂಡಿತು. ಇಂದು ಹಾಳುದೇಗುಲವಾಗಿರುವ ಈ ಮಠವನ್ನೇ ಊರ್ಜಿತಪಡಿಸಿ ಇದನ್ನೇ ಪಂಡಿತಾರಾಧ್ಯರ ಘನತೆಗೊಪ್ಪುವ ಮಹಾ ಸ್ಥಾನವನ್ನಾಗಿ ಮಾಡುತ್ತೇನೆಂದು ಸಂಕಲ್ಪಮಾಡಿದರು.

ಅಧಿಕಾರೋತ್ಸವವನ್ನು ನೆರವೇರಿಸಲು ಸರ್ಕಾರದ ಪ್ರತಿನಿಧಿಗಳಾಗಿ ಜಿಲ್ಲಾಧಿಕಾರಿಗಳಾದ ಶ್ರೀ ಜಿ. ಸುಂದರರಾಯರು, ಸಬ್ ಡಿವಿಜನ್ ಆಫೀಸ ರಾದ ಶ್ರೀ ಆರ್. ಪಿ. ಮಲ್ಲಪ್ಪನವರು, ಅಮಲ್ದಾರ್ ಶ್ರೀ ಜಿ. ನರಸಿಂಹಯ್ಯ ನವರು ಬಂದು ಮೂರು ದಿವಸಗಳು ನಿಂತು ಎಲ್ಲಾ ಕೆಲಸಗಳನ್ನು ಸಾಂಗವಾಗಿ ಆಗುಮಾಡಿ ಕೊಟ್ಟರು. ಮೈಸೂರು ಸಂಸ್ಥಾನದ ಬೇರೆಬೇರೆ ಕಡೆಗಳಿಂದ, ಉತ್ತರ ಕರ್ನಾಟಕದಿಂದ, ಆಂಧ್ರ ದೇಶದಿಂದ ಸ್ವಾಮಿಗಳು, ಭಕ್ತರು, ವಿದ್ವಾಂಸರು, ವೈದಿಕರು ಬಂದಿದ್ದು ಉತ್ಸವಕ್ಕೆ ಅಪೂರ್ವಕಳೆಯನ್ನು ತಂದು ಕೊಟ್ಟರು.

ಸಖರಾಯಪಟ್ಟಣದ ಶ್ರೀ ಸದಾಶಿವ ಶಿವಾಚಾರ್ಯರು ಪೀಠದ ಪದ್ಧತಿ ಯಂತೆ ಶಾಸ್ತ್ರೋಕ್ತವಾಗಿ ಉತ್ತರಾಧಿಕಾರವನ್ನು ಪಂಚಮುದ್ರಾಂಕನಗಳೊ ಡನೆ ಅನುಗ್ರಹಿಸಿದರು. ಈ ಸಮಯದಲ್ಲಿ ಆಚರಿಸಬೇಕಾದ ವಿಧಿವಿಧಾನಗಳ ಬಗ್ಗೆ ಸೇರಿದ್ದ ಸ್ವಾಮಿಗಳವರಲ್ಲಿ ಭಿನ್ನಾಭಿಪ್ರಾಯಗಳು ಬಂದವು. ಆದರೆ ಯಾವ ತೊಡಕು ತೊಂದರೆಯೂ ಒದಗದೆ ಉತ್ಸವವು ಸುಮುಖವಾಗಿ ವಿಜೃಂಭಣೆಯಿಂದ ನೆರವೇರಿತು. ಅಡ್ನೂರು ಚಂದ್ರಶೇಖರದೇವರ ಹೆಸರು ಪೀಠದ ಕ್ರಮದಂತೆ 'ಶ್ರೀಮದ್ವೀರಶೈವ ಮತಸ್ಥಾಪನಾಚಾರ್ಯ ಶ್ರೀ ೧೦೮ ಜಗದ್ಗುರು ಪಂಡಿತಾರಾಧ್ಯ ಪರಂಪರಾಗತ ಶ್ರೀ ಗಿರಿರಾಜ ಮಣಿಖಚಿತ ಕನಕ ಸೂರ್ಯಸಿಂಹಾಸನ ಪಟ್ಟಾಧ್ಯಕ್ಷ ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು' ಎಂದು ನಾಮಾಂತರ ಹೊಂದಿತು. ಶ್ರೀಗಳವರಿಗೆ ಅಧಿಕಾರವಾದ ಮೂರುತಿಂಗಳ ಮೇಲೆ ಸರ್ಕಾರ ದವರು ಸಮಸ್ತ ರಿಕಾರ್ಡುಗಳೊಂದಿಗೆ ಆಡಳಿತದ ಅಧಿಕಾರವನ್ನು ಶ್ರೀಗಳವರಿಗೆ ಒಪ್ಪಿಸಿದರು. ರಿಕಾರ್ಡುಗಳ ಜತೆಯಲ್ಲಿ ಸರ್ಕಾರ ಒಪ್ಪಿಸಿದ ಚರಾಸ್ತಿ ಮುನ್ನೂರು ರೂಪಾಯಿಗಳು ಮಾತ್ರ.

ಮಠದ ಅವ್ಯವಸ್ಥೆ, ಸುತ್ತಣ ಪರಿಸ್ಥಿತಿ ಶ್ರೀಗಳವರನ್ನು ದೊಡ್ಡ ಪರೀಕ್ಷೆಗೆ ಒಳಗುಮಾಡಿದವು. ಮಠದಲ್ಲಿ ಪಾತ್ರೆ ಪದಾರ್ಥಗಳೂ ಇರಲಿಲ್ಲ. ಹಿಂದಿನ ಸಾಲಗಳ ಹೊರೆ ಬೇರೆ. ಸುತ್ತಮುತ್ತಲಿನವರ ವಿರೋಧ. ಪರಿಚಯಸ್ಥರು, ಮಠದ ಹಿತೈಷಿಗಳು ಯಾರೂ ಸಮೀಪದಲ್ಲಿಲ್ಲ. ಜನರ ಬಳಕೆಯ ಭಾಷೆ ಯಾದ ತೆಲುಗು ಮಾತನಾಡಲು ಸ್ವಾಮಿಗಳಿಗೆ ಬಾರದು. ಮಠದ ಏಜಂಟರೂ ದಕ್ಷತೆಗೆ ಅಷ್ಟೇನೂ ಹೆಸರಾದವರಲ್ಲ.

ಇಂತಹ ಪರಿಸ್ಥಿತಿಯಲ್ಲಿಯೂ ಶ್ರಾವಣಮಾಸದಲ್ಲಿ ಆರ್ಯಗುರುಗಳ ಆರಾಧನಾಮಹೋತ್ಸವವನ್ನು ಮಾಡಲು ಶ್ರೀಗಳವರು ನಿರ್ಧರಿಸಿದರು. ಆ ಉತ್ಸವ ಸಂದರ್ಭದಲ್ಲಿ ಭಾಷಣಮಾಡಲು ಶ್ರೀಗಳವರು ನನಗೆ ಆ ಮಂತ್ರಣ ಕಳುಹಿಸಿದರು. ಮಠದ ಸ್ಥಿತಿಗತಿ ನೋಡಿ ನನಗೆ ತುಂಬ ವಿಷಾದವಾಯಿತು. 'ಪಾಪ! ಇವರಿಗೇಕೆ ಗಂಟುಬಿತ್ತು ಈ ಹಾಳು ಮಠ' ಎಂದು ಮಮ್ಮಲ ಮರುಗಿದೆ. ತಲೆಯ ಮೇಲೆ ಕವಿಯಲು ಸಿದ್ಧವಾಗಿದ್ದ ಮೇಲ್ಛಾವಣಿ, ನಿಂತ ಲ್ಲಿಯೇ ಕರಗುತ್ತಿದ್ದ ಗೋಡೆಗಳು. ಮಠವೆಲ್ಲಾ ಸುರಂಗಮಯ. ಹಿಂದಿದ್ದ ಮಹಾನುಭಾವರು ನೆಲದಲ್ಲಿ ಹುದುಗಿದ್ದ ಐಶ್ವರ್ಯವನ್ನು ಹೊತ್ತುಹಾಕುವ ಅವಸರದಲ್ಲಿ ಮಠವನ್ನು ತೋಡಿಬಿಟ್ಟಿದ್ದರು.

ಆರಾಧನಾಮಹೋತ್ಸವದ ಸಂಜೆ ನನ್ನ ಭಾಷಣ ಏರ್ಪಟ್ಟಿತು. ಉತ್ಸವಕ್ಕಾಗಿ ಬೆಂಗಳೂರಿನಿಂದ ಬಂದಿದ್ದ ಆಮಂತ್ರಿತರಲ್ಲದೆ ಸುತ್ತಮುತ್ತಲಿನ ಹಳ್ಳಿಗಳಿಂದ ನೂರಾರು ಜನ ಬಂದಿದ್ದರು. ನಾನು 'ಇಂದಿನ ಜಗತ್ತಿನ ಸಮಸ್ಯೆಗಳೂ, ಬಸವಣ್ಣನವರೂ' ಎಂಬ ವಿಷಯದ ಮೇಲೆ ಮಾತನಾಡಿದೆ. ಬೆಂಗಳೂರಿನಿಂದ ಬಂದಿದ್ದವರು ಮತ್ತು ಸಭಾಸದರಲ್ಲಿ ಎಂಟು ಹತ್ತು ಜನಕ್ಕೆ 'ಕನ್ನಡ' ಅರ್ಥವಾಗಿರಬಹುದು. ಕನ್ನಡದ ಹೃದಯದಂತಿರುವ ಮೈಸೂರಿನ ಒಂದು ಜಿಲ್ಲೆಗೆ ಬಂದೊದಗಿದ್ದ ಪರಿಸ್ಥಿತಿ ಕಂಡು ಮನಸ್ಸಿಗೆ ತುಂಬ ನೋವಾ ಯಿತು. ಕನ್ನಡದ ಗಡಿಯನ್ನು ರಕ್ಷಿಸುವುದರ ಸಲುವಾಗಿಯೇ ಶ್ರೀಗಳವರಿಗೆ ಸಿಡುಮಾಮಿಡಿ ಪೀಠಾಧಿಕಾರ ದೊರೆತಿರಬೇಕೆಂದು ನನಗೆ ಭಾಸವಾಯಿತು. ಅಂದೇ ಶ್ರೀಗಳವರು 'ಪಂಡಿತಾರಾಧ್ಯ ವಾಚನಾಲಯ, ಪುಸ್ತಕ ಭಂಡಾರ' ಗಳನ್ನು ಸ್ಥಾಪಿಸಿ ಕನ್ನಡ ಪ್ರಸಾರಕ್ಕೆ ಅಡಿಗಲ್ಲನ್ನು ಹಾಕಿದರು.

ಶ್ರೀಗಳವರು ಪ್ರವಾಸಹೊರಟು. ಧನ ಶೇಖರಿಸಿ ತಂದು ಮಠ ಜೀರ್ಣೋದ್ಧಾರ ಮಾಡದೆ ಬೇರೆ ಮಾರ್ಗವೇ ಇರಲಿಲ್ಲ. ಆದರೆ ಪ್ರವಾ ಹೊರಡುವುದೆಂತು ? ಅದಕ್ಕೆ ಮಠದ ಶಿಷ್ಯರಿಂದ ನಾಲ್ಕೈದು ಸಾವಿರ ರೂಪಾ ಸಾಲ ತೆಗೆದುಕೊಂಡು ಪ್ರವಾಸ ಆರಂಭಿಸಿದರು. ೧೯೪೦ ರಲ್ಲಿ ಬಾಗೇಪ ಗುಡಿಬಂಡೆ, ಪೆನುಕೊಂಡ, ಧರ್ಮಾವರ, ಹಿಂದೂಪುರ ತಾಲ್ಲೂಕುಗ ಪ್ರವಾಸಮಾಡಿ, ಆ ಸಲುವಾಗಿ ಆಗಿದ್ದ ಸಾಲ ತೀರಿಸಿದರು.

ಮಾಘಮಾಸ ಬಂದಿತು. ಬೆಂಗಳೂರಿನ ಸರ್ಪಭೂಷಣ ಮಠ ಶ್ರೀಗಳವರನ್ನು ಆಹ್ವಾನಿಸಿ ಅವರಿಂದ 'ಅನುಭವ ಮಂಟಪ'ದ ಆರಂಭೋತ್ಸ ನಡೆಸಿದರು. ಈ ಸಮಯದಲ್ಲಿ ರಥೋತ್ಸವದ ವ್ಯವಸ್ಥೆಯೂ ಆಗಿತ್ತು ಸರ್ಪಭೂಷಣ ಮಠದ ಶ್ರೀಗಳವರಿಗೆ 'ಅಭಿನವ – ಅಲ್ಲಮ' ಎಂಬ ಪ್ರಶ ಯನ್ನು ಕೊಡಲಾಯಿತು.

೧೯೪೧ರಲ್ಲಿ ಶ್ರೀಗಳವರು ಸತತ ಪ್ರವಾಸಕ್ರಮ ಕೈಗೊಂಡ ಚಿತ್ತೂರು, ಸೇಲಂ, ವೆಲ್ಲೂರು, ಚೆಂಗಲ್ಪೇಟೆ, ಕಂಚಿ, ವಾಲಾಜಾಪೇ ಪುಂಗನೂರುಗಳಲ್ಲಿ ಪ್ರವಾಸಮಾಡಿ ಜನರಿಗೆ ಸದ್ಬೋಧೆಮಾಡಿದರು. ಕಂಚಿ ವಾಲಾಜಪೇಟೆ, ಶೇಲಂ, ಪುಂಗನೂರುಗಳಲ್ಲಿ ಅಡ್ಡಪಲ್ಲಕ್ಕಿಯ ಮಹೋ ತ್ಸವಗಳಾದವು. ಕೋಲಾರದ ಕರ್ನಾಟಕ ಸಂಘದವರು ಶ್ರೀಗಳವರನ್ನು ಬ ಮಾಡಿಕೊಂಡು ಅವರ ಅಧ್ಯಕ್ಷತೆಯಲ್ಲಿ ತಮ್ಮ ಒಂಭತ್ತನೆಯ ವಾರ್ಷಿ ಕೋತ್ಸವವನ್ನು ನೆರವೇರಿಸಿ ಶ್ರೀಗಳವರಿಗೆ 'ಭಕ್ತಿ ಮಾಲಿಕೆ'ಯನ್ನರ್ಪಿಸಿದರು. ಈ ಸಲದ ರಥೋತ್ಸವದಲ್ಲಿ ಅನೇಕ ವಿದ್ವಾಂಸರನ್ನು ಬರಮಾಡಿಕೊಂಡ ಭಾಷಣ, ವಾಚನಗಳನ್ನೇರ್ಪಡಿಸಿದುದಲ್ಲದೆ ನವಿಲುಗುಂದದ ಶ್ರೀಗಳವರನ್ನು ಬರಮಾಡಿಕೊಂಡು ಅವರಿಗೆ 'ಸಾಹಿತ್ಯ ಸೇವಾಸಕ್ತ' ಎಂಬ ಪ್ರಶಸ್ತಿಯನ್ನು ಕೊಡಲಾಯಿತು. ಶ್ರೀಗಳವರ 'ಆಯ್ದಕ್ಕಿ ಮಾರಯ್ಯ' ನಾಟಕ ಪ್ರಕ ವಾಯಿತು. ಶ್ರೀಗಳವರ ಕನ್ನಡ ಪ್ರಸಾರದಿಂದ ಉತ್ತೇಜಿತರಾದ ಜನ ಕನ್ನಡ ಶಾಲೆಗಳು ಬೇಕೆಂದು ಕೋರತೊಡಗಿದರು.

ಎರಡನೆಯ ಮಹಾಯುದ್ಧದ ದುರ್ಭರ ಪರಿಸ್ಥಿತಿಯೊದಗಿತು. ಶ್ರೀಗ ವರು ಪ್ರವಾಸ ಹೊರಡದೆ ಮಠದಲ್ಲಿಯೇ ನಿಂತು ಮಠದ ರಿಪೇರಿ, ಜಮೀನಿನ ವ್ಯವಸ್ಥೆ ನೋಡಿಕೊಂಡರು. 'ಗುರುವಿನ ಗೆಲುವು', 'ಸೀಳ್ನುಡಿ' ಗ್ರಂಥಗಳನ್ನು

ಪ್ರಕಟಿಸಿದರು. ೧೯೪೪ರಲ್ಲಿ ಕೋಲಾರದಲ್ಲಿ ಕರ್ನಾಟಕ ಸಾಹಿತ್ಯ ಸಮಿತಿಯವರು ಏರ್ಪಡಿಸಿದ್ದ 'ಲೇಖಕರ ಸಮ್ಮೇಳನ'ದ ಅಧ್ಯಕ್ಷಸ್ಥಾನದಿಂದ ಉದ್ಘಾಮ ಭಾಷಣ ಮಾಡಿದರು.

೧೯೪೫ರಲ್ಲಿ ಶ್ರೀಗಳವರು ಬೆಂಗಳೂರಿಗೆ ದಯಮಾಡಿಸಿ ಶ್ರೀ ಗೌಡರ ವೀರಭದ್ರಪ್ಪನವರ ಛತ್ರದಲ್ಲಿ ತಂಗಿದರು. ಅವರು ಬೆಂಗಳೂರಿನಲ್ಲಿ ಇದ್ದಷ್ಟು ದಿನವೂ ಊರಿನ ಜನರಿಗೆ ಸಾಹಿತ್ಯ, ಧರ್ಮದ ಸಮಾರಾಧನೆಯಾಯಿತು. ರಥಸಪ್ತಮಿಯ ಮಹೋತ್ಸವವನ್ನು ಬೆಂಗಳೂರಿನಲ್ಲಿಯೇ ನೆರವೇರಿಸಿದರು. ಹನ್ನೊಂದು ದಿನ ಶ್ರೀಗಳಾದ ದೇವುಡು ನರಸಿಂಹ ಶಾಸ್ತ್ರಿಗಳು, ಅ. ನ. ಕೃಷ್ಣರಾಯರು, ತಿರುಮಲೆ ತಾತಾಚಾರ್ಯ ಶರ್ಮರು, ಟಿ. ಎನ್. ಚನ್ನಪ್ಪನವರು, ಓದಿನ ಲಿಂಗಣ್ಣಯ್ಯನವರು, ಅರ್ಚಿಕ ವೆಂಕಟೇಶರು, ಕುಮಾರ ವೆಂಕಣ್ಣನವರು ಮೊದಲಾದ ವಿದ್ವಾಂಸರ ಭಾಷಣಗಳಾದವು.

ಅಲ್ಲಿಂದ ಶ್ರೀಗಳವರು ನಿಡುಮಾಮಿಡಿಗೆ ಹಿಂದಿರುಗಿ ಮಠದಲ್ಲಿ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿದ್ದ ಶಾಸನಗಳನ್ನು ಪರಿಶೋಧಿಸಿದರು. ಇದರ ಫಲವಾಗಿ ಶ್ರೀ ಜಗದ್ಗುರು ಚಂದ್ರಭೂಷಣ ಸ್ವಾಮಿಗಳ, ಶ್ರೀ ಜಗದ್ಗುರು ಕ್ರಿಯಾಶಕ್ತಿ ಒಡೆಯರು ಈ ಪೀಠಕ್ಕೆ ಸಂಬಂಧಿಸಿದವರೆಂದು ತಿಳಿದುಬಂತು. ಶ್ರೀಗಳವರ 'ಶ್ರೀ ಕರಿಬಸವೇಂದ್ರರ ಒಸಗೆ' ಎಂಬ ಗದ್ಯ ಗ್ರಂಥ ಪ್ರಕಟವಾಯಿತು.

೧೯೪೭ರಲ್ಲಿ ಶ್ರೀಗಳವರು ಮತ್ತೆ ಪ್ರವಾಸ ಕೈಗೊಂಡು ಅನಂತಪುರ ಜಿಲ್ಲೆಯ ಪೆನುಕೊಂಡೆ, ಕದಿರಿ, ಮದನಪಲ್ಲಿ, ಅನಂತಪುರ, ಗುತ್ತಿ, ಕಲ್ಯಾಣದುರ್ಗ, ರಾಯದುರ್ಗ ತಾಲ್ಲೂಕುಗಳಲ್ಲಿಯೂ ಹಳ್ಳಿಗಳಲ್ಲಿಯೂ, ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು, ಚಳ್ಳಕೆರೆ ತಾಲ್ಲೂಕುಗಳಲ್ಲಿಯೂ ಸಾಹಿತ್ಯ, ಧರ್ಮಪ್ರಸಾರಮಾಡಿದರು.

೧೯೪೮ನೆಯ ಇಸವಿಯಲ್ಲಿ ಶ್ರೀಗಳವರು ಎರಡು ಮಹತ್ವದ ಕಾರ್ಯಗಳನ್ನೆಸಗಿದರು. ರಥೋತ್ಸವ ಸಮಯದಲ್ಲಿ ಹರಿಜನರಿಗೆ ಪ್ರವೇಶಕೊಟ್ಟರು. ಈ ಕಾರ್ಯವನ್ನು ಮೈಸೂರು ಸಂಸ್ಥಾನದಲ್ಲಿ ಮೊಟ್ಟಮೊದಲಿಗೆ ಮಾಡಿದ ಮಠಾಧಿಪತಿಗಳು ಶ್ರೀಗಳವರೇ. ಆ ಕಾರ್ಯಕ್ಕೆ ಮೈಸೂರಿನ ಪ್ರಧಾನ ಮಂತ್ರಿಗಳಾದ ಶ್ರೀ ಕೆ. ಚಂಗುಲರಾಯರೆಡ್ಡಿಯವರು ಆಹ್ವಾನಿತರಾಗಿ

ಬಂದಿದ್ದರು. ಮತ, ಪಂಥ, ಕೋಮುಗಳ ಭಾವನೆಯಿಲ್ಲದೆ ಎಲ್ಲ
ವಿದ್ಯಾರ್ಥಿಗಳಿಗೂ ಅನುಕೂಲಿಸುವಂತೆ ಶ್ರೀಗಳವರು ಗೋರಿಬಿದನೂರಿ
ಒಂದು ವಿದ್ಯಾರ್ಥಿ ನಿಲಯವನ್ನು ತೆರೆದರು. ಇದಕ್ಕಾಗಿ ಗೋರಿಬಿದನೂ
ಚಿಕ್ಕಬಳ್ಳಾಪುರ, ಸಿಡ್ಲಘಟ್ಟ, ಕೋಲಾರ, ಮಾಲೂರು, ಬಂಗಾರಪೇಟೆಗ
ಪ್ರವಾಸಮಾಡಿ ಧನ, ಧಾನ್ಯ ಸಂಗ್ರಹಿಸಿದರು. ವಿದ್ಯಾರ್ಥಿ ನಿಲಯ
ಎರಡೂವರೆ ಸಾವಿರ ರೂಪಾಯಿಗಳ ಇಡುಗಂಟಿದೆ. ಅದರಲ್ಲಿ ಮೂವ
ಜನ ವಿದ್ಯಾರ್ಥಿಗಳಿದ್ದಾರೆ. ಇಷ್ಟು ಅವಿಶ್ರಾಂತವಾದ ಚಟುವಟಿಕೆಗ
ಬಿಡುವು ಮಾಡಿಕೊಂಡು ಶ್ರೀಗಳವರು 'ಮುಪ್ಪಿನಾರ್ಯರ ಭಾವಪಾತ್ರಗ
ಮತ್ತು 'ಹೆಮ್ಮಗಳು' ಎಂಬೆರಡು ಗ್ರಂಥಗಳನ್ನು ಬರೆದು ಪ್ರಕಟಿಸಿದ

ಬೆಂಗಳೂರಿನಂಥ ಸಾಂಸ್ಕೃತಿಕ ಕೇಂದ್ರದಲ್ಲಿ ನಿಡುಮಾಮಿಡಿ ಸಂಸ್ಥಾ
ನದ ಕಾರ್ಯಕಲಾಪಗಳನ್ನು ನಡೆಸಲು ಒಂದು ಕಟ್ಟಡವಿರುವುದು ಅವಶ್ಯ
ವೆಂದು ಶ್ರೀಗಳವರಿಗೆ ತೋರಿತು. ನಿಡುಮಾಮಿಡಿ ಮಠದ ಹಿಂದಿನ ಸ್ವಾ
ಗಳಿಗೆ ಶ್ರೀ ಗರಡಿ ಚಿಕ್ಕವೀರಪ್ಪನವರು 'ಮರಿಸ್ವಾಮಿಗಳ ಮಠ'ವನ್ನು
ದಾನವಾಗಿ ಕೊಟ್ಟಿದ್ದರು. ಶ್ರೀ ಚಿಕ್ಕವೀರಪ್ಪನವರ ಮಕ್ಕಳಾದ ಶ್ರೀ ಗು
ಬಸಪ್ಪನವರು, ಆ ಮಠದಲ್ಲಿ ಒಂದು ವಿದ್ಯಾರ್ಥಿ ನಿಲಯ ನಡೆಸುವ ತಮ
ಇಚ್ಛೆಯನ್ನು ಸ್ವಾಮಿಗಳವರಲ್ಲಿ ನಿವೇದಿಸಿಕೊಂಡರು. ಶ್ರೀಗಳವರು ಉದಾ
ದೃಷ್ಟಿಯಿಂದ ತಮ್ಮ ಹಿರಿಯರಿಗೆ ದಾನರೂಪವಾಗಿ ಬಂದಿದ್ದ 'ಮರಿಸ್ವಾಮಿಗ
ಮಠ'ವನ್ನು ಶ್ರೀ ಗುರುಬಸಪ್ಪನವರಿಗೇ ವಹಿಸಿಬಿಟ್ಟರು.

ಅನಂತರ ಸೇಲಂ, ಚಿತ್ತೂರು ಜಿಲ್ಲೆಗಳ ಪ್ರವಾಸಕ್ರಮ ಕೈಗೊಂಡ
ಅಲ್ಲಿ ಸಂಗ್ರಹವಾದ ಹಣದಿಂದ ಬೆಂಗಳೂರು ಎಚ್. ಬಿ. ಸಮಾಜ ರಸ್ತೆಯ
ಮಠಕ್ಕಾಗಿ ಒಂದು ಸ್ಥಳಕೊಂಡರು. ಮಠಕ್ಕಾಗಿ ಸ್ಥಳವೇನೋ ಕೊಂ
ದಾಯಿತು, ಕಟ್ಟಡ ಕಟ್ಟಿಸುವುದಕ್ಕೆ ಹಣವನ್ನೆಲ್ಲಿಂದ ತರುವುದು ಎಂ
ಶ್ರೀಗಳವರು ಯೋಚಿಸುತ್ತಿದ್ದಾಗ ಶ್ರೀ ದುರ್ಗಂ ಬಜ್ಜಣ್ಣನವರು ಮತ್ತು
ಶ್ರೀಮತಿ ಎಂ. ಪಾರ್ವತಮ್ಮನವರು ಮುಂದೆ ಬಂದು ಉದಾರ ಮನಸ್ಸಿನಿಂ
ಕಟ್ಟಡಕ್ಕೆ ಆಗಬೇಕಾದ ಹಣವನ್ನು ತಾವು ಪೂರೈಸುವುದಕ್ಕೆ ಒಪ್ಪಿಕೊಂಡ
ಶ್ರೀ ದುರ್ಗಂ ಬಜ್ಜಣ್ಣನವರು ಮತ್ತು ಅವರ ಮಕ್ಕಳು ಶ್ರೀ ದುರ್ಗಂ ವೀರ
ನವರು ತಾವೇ ನಿಂತುಕೊಂಡು ಕಟ್ಟಡ ಕಟ್ಟಿಸಿಕೊಟ್ಟರು. ಇದಕ್ಕೆ 'ಜಗದ್ಗು

ನಿಡುಮಾಮಿಡಿ ನಿವಾಸ'ವೆಂದು ಹೆಸರಿಡಲಾಯಿತು. ತರುವಾಯ ಶ್ರೀಗಳವರು ತುಮಕೂರು, ನೆಲಮಂಗಲ, ಮಾಗಡಿ, ಕುಣಿಗಲ್ಲು ತಾಲ್ಲೂಕುಗಳಲ್ಲಿ ಸಂಚಾರ ಮಾಡಿ ವಿವಿಧ ವಿಷಯಗಳ ಮೇಲೆ ಭಾಷಣ ಬೋಧೆಗಳನ್ನೂ ಮಾಡಿದರು.

೧೯೫೯ ರ ರಥಸಪ್ತಮಿ ಮಹೋತ್ಸವವನ್ನು ಬೆಂಗಳೂರಿನ ನಿವಾಸ ದಲ್ಲಿಯೇ ನೆರವೇರಿಸಲಾಯಿತು. ಐದು ದಿನಗಳು ವಿದ್ವಾಂಸರ ಭಾಷಣ ಗಳಾದವು. ನಿವೃತ್ತಶ್ರೇಷ್ಠ ನ್ಯಾಯಾಧೀಶರಾದ ಶ್ರೀ ಪಿ. ಮಹದೇವಯ್ಯ ನವರು, ಶ್ರೀ ಜಿ. ಪರಮಶಿವಯ್ಯನವರು ಕಾರ್ಯಭಾಗಿಗಳಾಗಿದ್ದರು. ಶ್ರೀಗಳಾದ ಕೆ. ಎಸ್. ಧರಣೇಂದ್ರಯ್ಯ, ಬಿ. ಶಿವಮೂರ್ತಿಶಾಸ್ತ್ರಿ, ಸಿ. ಕೆ. ವೆಂಕಟ ರಾಮಯ್ಯ, ಅ. ನ. ಕೃಷ್ಣರಾಯ, ಓದಿನ ಲಿಂಗಣ್ಣಯ್ಯ ಮೊದಲಾದ ವಿದ್ವಾಂಸರ ಭಾಷಣಗಳಾದವು. ಶ್ರೀಗಳಾದ ಪಾಮಿಡಿ ಸುಬ್ಬರಾಮಶೆಟ್ಟರು, ಶ್ರೀ ಟಿ. ಎನ್. ಮಲ್ಲಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಪಂಡಿತರಿಗೆ ಪ್ರಶಸ್ತಿಗಳನ್ನು ಶ್ರೀಗಳವರು ದಯೆಪಾಲಿಸಿದರು. ಈ ವರ್ಷ ಶ್ರೀಗಳವರು ಉತ್ತರ ಕರ್ನಾಟಕದ ಧಾರವಾಡ, ವಿಜಾಪುರ, ಬೆಳಗಾಂವಿ, ಕೊಪ್ಪಳ ಪ್ರಾಂತದಲ್ಲಿ ಸಂಚರಿಸಿ ಕರ್ನಾಟಕ ಏಕೀಕರಣ, ಧರ್ಮ, ವಿದ್ಯೆ, ನೀತಿಯ ಪ್ರಚಾರಮಾಡಿದರು. ಜತೆಗೆ ಗದ್ದುಗೆಯ ಶಾಖಾಮಠಗಳ ರಿಕಾರ್ಡುಗಳ ಪರಿಶೋಧನೆಯನ್ನೂ ಮಾಡಿದರು. ನವಿಲುಗುಂದದಲ್ಲಿ ನಡೆದ 'ಸರ್ವಧರ್ಮ ಸಮ್ಮೇಳನ'ದಲ್ಲಿಯೂ ಗದುಗಿನಲ್ಲಿ ನಡೆದ 'ಶಿವಾನುಭವ ಸಮ್ಮೇಳನ'ದಲ್ಲಿಯೂ ಶ್ರೀಗಳವರು ಭಾಗವಹಿಸಿ ವಿಚಾರಪೂರ್ಣ ಭಾಷಣಗಳನ್ನು ಮಾಡಿದರು. ಚಿಕ್ಕಮಗಳೂರು ಜಿಲ್ಲೆ ಗಿರಿಯಾಪುರದಲ್ಲಿ ನಡೆದ 'ಶಿವಾನುಭವ ಸಪ್ತಾಹ'ದ ಪ್ರಾರಂಭೋತ್ಸವದ ಅಧ್ಯಕ್ಷತೆ ವಹಿಸಿ ಶ್ರೀಗಳವರು ಉದಾತ್ತವಾದ ಭಾಷಣ ಮಾಡಿದರು. ಶ್ರೀಗಳವರ 'ವಚನಾಂಜಲಿ' ಮತ್ತು 'ಸಮ್ಯಜ್ಞಾನಿ ಚನ್ನಬಸ ವಣ್ಣ' ಎಂಬೆರಡು ಗ್ರಂಥಗಳು ಪ್ರಕಟವಾದವು.

೧೯೬೦ರಲ್ಲಿ ಶ್ರೀಗಳವರು ಕೊಪ್ಪಳಕ್ಕೆ ತಮ್ಮ ಭಕ್ತರ ಕೋರಿಕೆಯಂತೆ ಹೋಗಬೇಕಾಗಿ ಬಂತು. ಇದೇ ಸಂದರ್ಭವನ್ನು ಬಳಸಿಕೊಂಡು ಸಂಸ್ಥಾನದ ಶಾಖಾಮಠಗಳ ಗದ್ದುಗೆ, ದೇವಸ್ಥಾನಗಳ ರಿಕಾರ್ಡ್ ಸಂಗ್ರಹಿಸಲು ಆಸ್ಥಾನ್ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ ಮತ್ತು ಶ್ರೀ ಜಿ. ಟಿ. ಅಕ್ಕುಲಯ್ಯ ನವರೊಡನೆ ಸಂಚಾರಮಾಡಿ ಅನೇಕ ವಿಷಯಗಳನ್ನು ಸಂಗ್ರಹಿಸಿದರು.

4

ಈ ವೇಳೆಗೆ 'ನಾಡಹಬ್ಬ' ಒದಗಿ ಬಂದುದರಿಂದ ಹೊಸಪೇಟೆ, ಗದಗು ನಗರಗಳ ನಾಡಹಬ್ಬ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಶ್ರೀಗಳವರ 'ಅಣ್ಣನ ಬದುಕು', 'ಕಾರಣಿಕ ಕುಮಾರಯೋಗಿ' ಗ್ರಂಥಗಳು ಪ್ರಕಟವಾದವು.

ಸತತ ಪ್ರವಾಸ, ಮಿತಿಯಿಲ್ಲದ ದುಡಿಮೆಯಿಂದ ಈ ವರ್ಷ (೧೯೫೧) ಶ್ರೀಗಳವರ ಆರೋಗ್ಯ ತೀರಾ ಕೆಟ್ಟಿತು. ಮಾನಸಿಕ, ಬೌದ್ಧಿಕ ಕಾರ್ಯಕ್ಕೆ ಕೈಹಾಕದೆ ಪೂರ್ಣ ವಿಶ್ರಾಂತಿ ಪಡೆಯುವುದು ಅವರಿಗೆ ಅತ್ಯವಶ್ಯಕವಾಗಿತ್ತು. ಆದರೆ ಶ್ರೀಗಳವರದು ವಿಶ್ರಾಂತಿ ಬಯಸುವ ಚೇತನವಲ್ಲ. 'ವಚನಾಂಜಲಿ. ಎರಡನೆಯ ಭಾಗ' (ವಚನಮಂಜರಿ) ಬರೆದು ಪೂರೈಸಿದರು. ಆ ಗ್ರಂಥ ಇದೇ ಈಗ ಪ್ರಕಟವಾಗಿದೇ ಮಠದ ಮೂಲಸ್ಥಳ ಪುರಾಣದ ಪ್ರಕಟನೆಯ ಕಾರ್ಯವೂ ಸಾಗಿದೆ. ಶ್ರೀಗಳವರು 'ಅಲ್ಲಯ್ಯನ ಬೆಳಕು', 'ಯೋಗ-ಕ್ಷೇಮ', 'ಯೋಗಿರಾಜ ಪ್ರಭುಕುಮಾರ ಪಟ್ಟಾಧ್ಯಕ್ಷರು' ಎಂಬ ಮೂರು ಗ್ರಂಥಗಳನ್ನು ಬರೆದು ಮುಗಿಸಿದ್ದಾರೆ.

೫

ಶ್ರೀಗಳವರು ಈ ಹನ್ನೆರಡು ವರ್ಷ (೧೯೪೦-೧೯೫೧) ಸಾಧಿಸಿರುವುದು ಅವರಿಗಿದ್ದ ಅನುಕೂಲ, ಒದಗಿದ್ದ ಪರಿಸ್ಥಿತಿಯಲ್ಲಿ ಯಾರಿಗಾದರೂ ಆಶ್ಚರ್ಯವನ್ನುಂಟುಮಾಡದಿರದು. ಇದ್ದ ಅಲ್ಪ ದೇಹಾರೋಗ್ಯವನ್ನು ಕಡೆಗಾಣಿಸಿ ಧರ್ಮ, ಸಾಹಿತ್ಯದ ಅಭ್ಯುದಯಕ್ಕೆ ಸತತವಾಗಿ ಶ್ರಮಿಸಿ ಕೃತಾರ್ಥರಾಗಿದ್ದಾರೆ.

ಶ್ರೀಗಳವರು ಪಟ್ಟಕ್ಕೆ ಬಂದಾಗ 'ಕನ್ನಡನುಡಿ' ಪತ್ರಿಕೆಯ ಸಂಪಾದಕನಾಗಿದ್ದ ನಾನು ವ್ಯಕ್ತಪಡಿಸಿದ ಆಶಯವಿದು

"ಕನ್ನಡ ನುಡಿಗೂ ಕನ್ನಡ ಸಾಹಿತ್ಯಕ್ಕೂ ಅನೇಕ ರೀತಿಯಲ್ಲಿ ಸೇವೆ ಮಾಡುತ್ತಿರುವ ಶ್ರೀ ಚಂದ್ರಶೇಖರ ದೇವರು ಅಡ್ನೂರು ಅವರಿಗೆ ಕೋಲಾರ ಜಿಲ್ಲೆಯಲ್ಲಿರುವ ಶ್ರೀ ನಿಡುಮಾಮಿಡಿ ಮಠದ ಪಟ್ಟಾಧಿಕಾರವು ದೊರೆತದ್ದು ನಮಗೆ ತುಂಬ ಸಂತೋಷವನ್ನುಂಟುಮಾಡಿದೆ....ಗುರು ಪೀಠಾರೋಹಣ ಮಾಡಿದ ಕೂಡಲೆ ನೂತನ ಪಟ್ಟಾಧ್ಯಕ್ಷರಾದ ಶ್ರೀ ಚನ್ನಬಸವದೇಶಿಕೇಂದ್ರ ಶಿವಾಚಾರ್ಯ ಸ್ವಾಮಿಗಳವರು ಹೀಗೆ ಅಪ್ಪಣೆಕೊಡಿಸಿದ್ದಾರೆ. 'ಈ ಮಹಾ

ಪೀಠವನ್ನು ಆರೋಹಣಮಾಡಿದ ಮಾತ್ರದಿಂದಲೇ ಗುರುವೆಂಬ ಹೆಮ್ಮೆಯಿಂದ ಮೆರೆಯಬೇಕೆಂಬ ಅಭಿಮಾನ ನಮಗಿಲ್ಲ. ನಾವು ನಿಜವಾಗಿಯೂ ಒಬ್ಬ ಸಮಾಜ ಸೇವಕರೆಂದು ಧರ್ಮಪ್ರಚಾರಕರೆಂದು ಕಾರ್ಯಮಾಡಲು ಸಂಕಲ್ಪಿಸಿದ್ದೇವೆ.' ಉದಾತ್ತವಾದ ಆಶಯವನ್ನು ತಮ್ಮ ಕಣ್ಣುಮುಂದೆ ಇಟ್ಟುಕೊಂಡು ಶ್ರೀ ಸ್ವಾಮಿಗಳವರು ತಮ್ಮ ಧರ್ಮ, ಸಮಾಜದ ಸೇವೆಗೆ ಹೊರಟದ್ದಾರೆ. ವಚನ ಶಾಸ್ತ್ರದ ಮೇಲೂ ಅಕ್ಕಮಹಾದೇವಿ, ಬಸವೇಶ್ವರ ಮೊದಲಾದ ಶಿವ ಶರಣ ಶರಣೆಯರ ಮೇಲೂ ಹರಿಹರ, ಗುಬ್ಬಿ ಮಲ್ಲಣಾರ್ಯ ಮೊದಲಾದ ವೀರಶೈವ ಕವಿಗಳ ಮೇಲೂ ಅನೇಕ ಲೇಖನಗಳನ್ನು ಬರೆದು ಶ್ರೀ ಸ್ವಾಮಿಗಳವರು ತಮ್ಮ ಪಾಂಡಿತ್ಯ, ವಿಮರ್ಶನ ಶಕ್ತಿ, ಧಾರ್ಮಿಕ ಸಮಭಾವನೆಗಳನ್ನು ಹೊರಗೆಡಹಿದ್ದಾರೆ. ಇಂತಹ ಸುಸಂಸ್ಕೃತರು ಮಠಾಧಿಕಾರಿಗಳಾಗಿರುವುದರಿಂದ ನಮ್ಮ ಸಮಾಜ ಧರ್ಮಗಳು ಬದುಕುತ್ತವೆಂಬ ಆಶೆ ಮೂಡುತ್ತದೆ.... ಶ್ರೀ ಸ್ವಾಮಿಗಳವರು ತಮ್ಮ ಸಾಹಿತ್ಯ ಸೇವೆಯನ್ನು ಮುಂದುವರಿಸಿ, ಪ್ರಕಾಶವಾಗದೆ ಉಳಿದಿರುವ ವೀರಶೈವ ಕಾವ್ಯ, ಪುರಾಣ, ಧರ್ಮಗ್ರಂಥಗಳನ್ನು ಬೆಳಕಿಗೆ ತರಲೆಂದು ನಾವು ಹಾರೈಸುತ್ತೇವೆ."*

ಹನ್ನೆರಡು ವರ್ಷಗಳ ಕೆಳಗೆ ನಾನು ವ್ಯಕ್ತಮಾಡಿದ ಆಸೆ ನಿರೀಕ್ಷೆಗಿಂತಲೂ ಮಿಗಿಲಾಗಿ ಸಾರ್ಥಕವಾಗಿರುವುದನ್ನು ಕಂಡು ನನಗೆ ಪರಮ ಸಂತೋಷವಾಗಿದೆ. ಗುರುಸ್ಥಾನ ಕೇವಲ ಒಂದು ಸಂಕೇತ. ಒಂದು ಪೀಠದ ಮೇಲೆ ಕುಳಿತಕೂಡಲೆ ಯಾರಿಗೂ ಗುರುತ್ವದ ಮಹಿಮೆ, ಯೋಗ್ಯತೆ ಬರುವುದಿಲ್ಲ. ಗುರುವೂ ಪರಮಸಾಧಕನಾಗಿರಬೇಕು. ಸ್ಥಾನ ತಾನಾಗಿ ತಂದೊಡ್ಡುವ ವಿಲೋಭನೆಗಳನ್ನು ಗೆಲ್ಲಲು ಸಮರ್ಥನಾಗಿರಬೇಕು.

ಇಂದು ಗುರುಗಳ ಸಂಖ್ಯೆ ಹೆಚ್ಚಾಗಿದೆಯೇ ವಿನಾ ಗುರುತ್ವದ ಗಾಂಭೀರ್ಯ, ಯೋಗ್ಯತೆ ಉಳಿದಿಲ್ಲ. ಗುರುಗಳ ಹೇಯಜೀವನ ನೋಡಿದರೆ ಸಾಮಾನ್ಯ ಲೌಕಿಕರ ಜೀವನ ಎಷ್ಟೋ ಪರಿಶುದ್ಧವಾಗಿ, ತ್ಯಾಗಮಯವಾಗಿದೆ. ಇಂದು ಗುರುಮನೆಗಳು ದೇವರ ಆವಾಸಸ್ಥಾನಗಳಾಗಿಲ್ಲ, ಪಿಶಾಚಿಗಳ ಪ್ರೇತವನಗಳಾಗಿವೆ.

---

* "ಕನ್ನಡ ನುಡಿ" — ೨೭-೬-೪೯.

ಆದರೆ ನಿಡುಮಾಮಿಡಿ ಶ್ರೀಗಳಂಥ ಕೆಲವು ಗುರುಗಳು ಅದು ಪರಾಗತ ಕೀರ್ತಿಯನ್ನು ಕಾಪಾಡಲು ಯತ್ನಿಸುತ್ತಿದ್ದಾರೆ. ಶುದ್ಧವಾ ಜೀವನ, ಸುಭಗವಿಚಾರ, ಸೇವಾಪರಾಯಣತೆಗಳಿಂದ ಗುರುತ್ವಕ್ಕೆ ಬಂದೊ ಗಿರುವ ಅಪಯಶಸ್ಸನ್ನು ತೊಡೆಯಲೆತ್ನಿಸುತ್ತಿದ್ದಾರೆ. ತಮ್ಮ ಸಕಲ ಸಂ ತ್ರನ್ನು ದೀನ, ದಲಿತ, ಅಜ್ಞಾನಿಗಳ ಸೇವೆಗೆ ಮೀಸಲುಮಾಡಿದ್ದಾರೆ.

ಶ್ರೀಗಳವರ ಸಾಹಿತ್ಯಸೇವೆಗೆ ವಿಶೇಷ ನೆರವಾಗಿ ಅವರ ಕೃತಿಗಳ ಯೋಗ್ಯರೀತಿಯಲ್ಲಿ ಅಚ್ಚಾಗಿ ಪ್ರಕಟವಾಗುವುದಕ್ಕೆ ಕಾರಣರಾದ ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರವರು ಕನ್ನಡಿಗರ ಕೃತಜ್ಞತೆ ಪಾತ್ರರಾಗಿದ್ದಾರೆ.

'ನುಡಿಯೊಡತಿಯ ಪರಮಭಕ್ತರಾಗಿ, ಕನ್ನಡಸೇವಕರಾಗಿ, ದೀನ ದಲಿತರ ಆರಾಧಕರಾಗಿ ಶ್ರೀ ಶ್ರೀಗಳವರು ತಮ್ಮ ನಡೆ, ನುಡಿಯಿಂದ ಕನ್ನ ಗರ ಬಾಳನ್ನು ಹಸನುಮಾಡುತ್ತಿದ್ದಾರೆ. ಇವರನ್ನು ಗುರುಗಳಾಗಿ ಪಡೆ ಮಠ, ಸಮಾಜ ಧನ್ಯ. ಇವರನ್ನು ಕನ್ನಡಿಗರನ್ನಾಗಿ ಪಡೆದ ನಾಡನು ಧನ್ಯರು.'†

---

† "ಕನ್ನಡ ಕುಲರಸಿಕರು": ಅ. ನ. ಕೃಷ್ಣರಾಯ: (ಪುಟ ೯೩)

## ೩. ಶ್ರೀಗಳವರ ಕೃತಿವಿಸ್ತಾರ

### ೧. ಅಕ್ಕಮಹಾದೇವಿ

ವೀರಶೈವ ಸಾಹಿತ್ಯೇತಿಹಾಸದಲ್ಲಿ ಮಹಾದೇವಿಯಕ್ಕನದು ವಿಶಿಷ್ಟ ಸ್ಥಾನ. ಭಕ್ತಿ, ಜ್ಞಾನ, ವೈರಾಗ್ಯವೆಂಬ ಮೂರು ಮಹಾಶ್ವಗಳನ್ನು ತನ್ನ ಜೀವರಥಕ್ಕೆ ಹೂಡಿ ನಡೆಸಿರುವ ಹಿರಿಮೆ ಮಹಾದೇವಿಯಕ್ಕನದು. ಆಕೆಯ ನಿರ್ಮಲ ತೇಜಸ್ಸಿಗೆ ಅಲ್ಲಮಪ್ರಭು, ಬಸವಣ್ಣ, ಚನ್ನಬಸವಣ್ಣಾದಿ ಪ್ರಮಥರು ಮಾರುವೋಗಿದ್ದರು.

ಮಹಾದೇವಿಯಕ್ಕನನ್ನು ಕುರಿತು ಅಲ್ಲಮಪ್ರಭು

"ತನುಗುಣನಾಸ್ತಿಯಾಗಿ ಲಿಂಗಸಂಗಿಯಾದಳು.
ಮನಗುಣನಾಸ್ತಿಯಾಗಿ ಅರಿವುಸಂಗಿಯಾದಳು.
ಭಾವಗುಣನಾಸ್ತಿಯಾಗಿ ಮಹಾಪ್ರಭೆ ತಾನಾದಳು.
ತಾನಿದಿರೆಂಬೆರಡನಳಿದು ನಮ್ಮ ಗುಹೇಶ್ವರ ಲಿಂಗದಲ್ಲಿ
ಸ್ವಯಲಿಂಗವಾದ ಮಹಾದೇವಿಯಕ್ಕಗಳ ನಿಲವಿಗೆ
ಶರಣೆನುತಿರ್ದೆನು."

ಎಂದು ಹೇಳಿರುವುದೂ ಚನ್ನಬಸವಣ್ಣ

"ಅಜಕೋಟ ವರುಷದವರೆಲ್ಲರು ಹಿರಿಯರೇ ?
ಹುತ್ತೇರಿ ಬೆತ್ತಬೆಳೆದ ತಪಸ್ವಿಗಳೆಲ್ಲರು ಹಿರಿಯರೇ ?
ನಡುಮುರಿದು, ಗುಡಗೂರಿ, ತಲೆ ನಡುಗಿ, ನರೆತರೆ ಹೆಚ್ಚಿ,
ಮತಿಗೆಟ್ಟು
ಒಂದನಾಡಹೋಗಿ, ಒಂಭತ್ತನಾಡುವ ಅಜ್ಞಾನಿಗಳೆಲ್ಲರು
ಹಿರಿಯರೇ ?
ಅನುವರಿದು ಘನವಬೆರಸಿ ಹಿರಿದು ಕಿರಿದೆಂಬ ಭೇದವ ಮರೆದು
ಕೂಡಲ ಚನ್ನಸಂಗಯ್ಯನಲ್ಲಿ ಬೆರಸಿ ಬೇರಲ್ಲದಿಪ್ಪ ಹಿರಿಯತನ
ನಮ್ಮ ಮಹಾದೇವಿಯಕ್ಕಂಗಾಯಿತ್ತು."

"ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ.
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ.
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ.
ಅಜಗಣ್ಣನ ಐದು ವಚನಕ್ಕೆ ಕೂಡಲ ಚನ್ನಸಂಗಯ್ಯನಲ್ಲಿ
ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣಾ
ಸಿದ್ಧರಾಮಯ್ಯ!!

ಎಂದು ಹೇಳಿರುವುದೂ ಬಸವಣ್ಣ

"ಹೆಂಗುಸಿನಂಗವ ನೋಡಿದೆ ಪುರಾತನರು.
ಬಾಲತನದಂಗವ ನೋಡಿದೆ ಪುರಾತನರು.
ಬ್ರಹ್ಮವನಾಚರಿಸಿ, ತನ್ನ ಮರೆದಿಪ್ಪುದ ನೋಡಿದೆ ಲಿಂಗವಂತ
ತನ್ನಲ್ಲಿ ತಾನು ನಿಶ್ಚಯವಾಗಿ ಭಾಷೆ ಬೀಸರವೋಗದೆ ಇಪ್ಪ ಇ
ಕೂಡಲಸಂಗಮದೇವನಲ್ಲಿ ನಮ್ಮ ಮಹಾದೇವಿ
ಯಕ್ಕಂಗಾಯಿತ್ತು!

ಎಂದು ನುಡಿದಿರುವುದೂ ಮಹಾದೇವಿಯ ಘನವ್ಯಕ್ತಿತ್ವದ ಸಾಕ್ಷ್ಯಗ ಗಿವೆ. 'ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು ? ಭಾವಿಸಲು ಗಂಡು ರೂ ಎಂದು ಹೇಳುವ ಕೆಚ್ಚು ಮಹಾದೇವಿಯಕ್ಕನದು. ಆಧ್ಯಾತ್ಮಿಕ ಪ್ರಗ ಯಲ್ಲಿ ಸ್ತ್ರೀ ಯಾವ ಹಂತವನ್ನು ಹತ್ತಬಹುದೆಂಬುದನ್ನು ತೋರುವುದ ಮಹಾದೇವಿಯಕ್ಕನ ಆಧ್ಯಾತ್ಮಿಕ ಜೀವನವು ನೆರವಾಗುತ್ತದೆ. ಆತ್ಮ ಗಂಡುಹೆಣ್ಣುಗಳೆಂಬ ಕೀಳು ಪ್ರಬೇಧಗಳಿಲ್ಲವೆಂದು ಮಹಾದೇವಿಯಕ್ಕ ಸಾರಿ, ನಾಡ ಹೆಣ್ಣುಮಕ್ಕಳ ಹೃದಯದಲ್ಲಿ ಹೊಸ ಧೈರ್ಯ ಚೈತನ್ಯಗಳನ್ನ ಬಿತ್ತಿದಳು. ಅವಳ ಸಾಧನೆಯ ಸಾಹಸ, ಜೀವನದ ಉಚ್ಚ ಆದರ್ಶ, ಆ ಆದರ್ಶಸಾಧನೆಯಲ್ಲಿ ತೋರಿದ ಧೈರ್ಯಸ್ಥೈರ್ಯ ಜಗತ್ತಿನ ಆಧ್ಯಾತ್ಮಿ ಇತಿಹಾಸದಲ್ಲಿಯೇ ಮಹಾದೇವಿಯಕ್ಕನಿಗೆ ಉಚ್ಚಸ್ಥಾನವನ್ನು ದೊರಕಿ ಕೊಟ್ಟಿದೆ........ತನ್ನ ಆತ್ಮಾನುಭವದಿಂದ ಮಹಾ ಶಿವಶರಣಶರಣೆಯ ಪಂಙ್ತಿಯಲ್ಲಿ ಜಗತ್ತಿನ ಆಧ್ಯಾತ್ಮಜೀವಿಗಳ ಶ್ರೇಣಿಯಲ್ಲಿ ಹಿರಿದೂ ಅಮ ವಾದುದೂ ಆದ ಸ್ಥಾನವನ್ನು ದೊರಕಿಸಿಕೊಂಡಳು. ಆದರ್ಶ ಜೀವನವನ್ನ ಸಾಗಿಸಿ ಜಗತ್ತಿಗೆ ಆದರ್ಶಳಾದಳು. ಕರ್ಮದ ಕದಳಿಯಲ್ಲಿ ಸಿಲುಕಿ ತೊ

ಲುವ ಲೋಗರಿಗೆ ಧೈರ್ಯವನ್ನೂ ಆಸೆಯನ್ನೂ, ನೆರವನ್ನೂ ಇತ್ತು ತನ್ನ ಜನ್ಮ ಸಫಲಮಾಡಿಕೊಂಡಳು.' *

ಈಚೆಗೆ ಕನ್ನಡದಲ್ಲಿ ಮಹಾದೇವಿಯಕ್ಕನಮೇಲೆ ವಿಪುಲವಾದ ಸಾಹಿತ್ಯ ಬೆಳೆದುಬಂದಿದೆ. ಆಕೆಯ ಜೀವನಚರಿತ್ರೆಗಳೂ, ಆಕೆಯ ಜೀವನದಮೇಲೆ ನಾಟಕಗಳೂ ಬಂದಿವೆ–ಬರುತ್ತಿವೆ. ಈ ಲೇಖಕರಲ್ಲಿ ಪ್ರೊ. ಕೆ. ಜಿ. ಕುಂದಣಗಾರರನ್ನು ಬಿಡು ಬೇರೆ ಯಾರೂ ಮಹಾದೇವಿಯಕ್ಕನ ಜೀವನವನ್ನು ಐತಿಹಾಸಿಕ ದೃಷ್ಟಿಯಿಂದ ವಿವೇಚಿಸಿದಂತೆ ಕಂಡುಬರುವುದಿಲ್ಲ. ಮಹಾದೇವಿ ಯಕ್ಕನಮೇಲೆ ಬರೆಯುವ ಲೇಖಕರಿಗೆಲ್ಲಾ ಉಪರತಿಯ (inhibition) ಬಾಧೆ. ಮಹಾದೇವಿಗೆ ವಿವಾಹವಾಗಿತ್ತೆಂದು ಒಪ್ಪಿಕೊಂಡರೆ ವೀರಶೈವರಿಗೆ ಅಸಮಾಧಾನವಾಗುತ್ತದಲ್ಲಾ ಎನ್ನುವ ಭಯ.

ಮಹಾದೇವಿಯಕ್ಕನ ಕಾವ್ಯಮಯ ಜೀವನವನ್ನು ಕಾವ್ಯಮಯವಾಗಿ ಬರೆದಿರುವ ಶ್ರೀಗಳವರೂ ಇತಿಹಾಸದ ಗೋಜಿಗೆ ಹೋಗಿಲ್ಲ.

"ಊರೊಳಗೆ ವೈಹಾಳಿಗೆ ಬಂದ ದೊರೆ ಕೌಶಿಕ, ಮಹಾದೇವಿಯ ರೂಪಕ್ಕೆ ಒಲಿಯಾಗಿ ಭ್ರಾಂತನಾಗುತ್ತಾನೆ. ಅವಳನ್ನು ಮದುವೆಯಾಗಲು ಇಚ್ಛಿಸಿ ತನ್ನ ಮಂತ್ರಿಯ ಸಂಗಡ ಹೇಳಿಕಳುಹಿಸುತ್ತಾನೆ. ಆತ್ಮರತಿಯಲ್ಲಿ ಬೆರೆದು ವೀರವಿರತೆಯಾದ ಅವಳಿಗೆ ಈ ಸ್ವಪ್ನಮಯವಾದ ಸಾಮ್ರಾಜ್ಯ ಭೋಗದ ತೃಷ್ಣೆಯು ಎಳ್ಳಷ್ಟೂ ಇರಲಿಲ್ಲ, ಹರನೇ ಗಂಡನಾಗಬೇಕೆಂದು ಅನಂತಕಾಲ ತಪಿಸಿದ ತಾಯಿಯು ಕೌಶಿಕನಂತಹ ರಾಜನಿಗೆ ಬಾಯ್ನೀರು ಕರೆಯಬೇಕಾಗಿರಲಿಲ್ಲ. ಅವಳಿಗೆ ಅರಮನೆತನದ ಅರಸಿಯಾಗುವ ಕುಲ ಛಲವೂ, ಬಲದೊಲವೂ ಇದ್ದಿರಲಿಲ್ಲ. ಅವೆಲ್ಲ ಅವಳಿಗೆ ತೃಣಪ್ರಾಯ ವಾಗಿದ್ದವು

'ಅಯ್ಯಾ, ಮೂಲಾಂಹಂಕಾರವಿಡಿದು, ಕುಲಭ್ರಮೆ, ಛಲಭ್ರಮೆ,
ಜಾತಿಭ್ರಮೆ,

---

* "ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ: ಅ. ನ. ಕೃಷ್ಣರಾಯ –ಪುಟ ೧೩೪.

ನಾಮವರ್ಣಾಶ್ರಮ ಮತಶಾಸ್ತ್ರಭ್ರಮೆ, ರಾಜ್ಯಭ್ರಮೆ,
ಧನಧಾನ್ಯ ಮಿತ್ರ-ಐಶ್ವರ್ಯ ತ್ಯಾಗ-ಯೋಗಭ್ರಮೆ,
ಕಾಯಕರಣ ವಿಷಯಭ್ರಮೆ,
ವಾಯು ಮನ ಭಾವ ಜೀವ ಭ್ರಮೆ,
ಶಿವೋಹಂ ಭ್ರಮೆ,
ಮಾಯಾ ಮೋಹ ಭ್ರಮೆ,

ಮೊದಲಾದ ಮೂವತ್ತೆರಡು ಪಾಶಾಭ್ರಮಿತರಾಗಿ ತೊಳಲುವ
ವೇಷಧಾರಿಗಳ ಕಂಡು........ಎನ್ನ ಮನ ನಾಚಿ ನಿಮ್ಮಡಿಗಳ
ಮುಖವಾಯಿತ್ತಯ್ಯ ಚನ್ನಮಲ್ಲಿಕಾರ್ಜುನ.'

ಇಂತೆಲ್ಲ ಭ್ರಮಿತರನ್ನೇ ನೋಡದ ನುಡಿಸದ ಅಕ್ಕನು ರಾಜಭೋ[illegible] ಮನಸುಮಾಡುವಳೆ? ಆಗದು; ಎಂದಿಗೂ ಆಗದು. ಆ ಕಾರಣದಿ[illegible] ಅವಳು ಕೌಶಿಕದೊರೆಯ ಸಾಮ್ರಾಜ್ಯಸುಖವನ್ನು ಮನವೆಳಸಿ ಬಯ[illegible] ಕಣ್ಣೆತ್ತಿ ನೋಡದೆ ಕಾಲಿನಂಗುಟದಿಂದ ತಳ್ಳಿಬಿಟ್ಟಳು; ತೂರಿಬಿಟ್ಟ[illegible] ಅವಳು ಅಂಗದಿಂದ ಅಬಲೆಯಾಗಿದ್ದರೂ ಆತ್ಮಬಲದಿಂದ ಸಬಲೆಯಾಗಿದ್ದ[illegible] ಗಂಡುರೂಪಾಗಿದ್ದಳು. ಅಂತಹ ಆತ್ಮವೀರಳ ಕೆಚ್ಚೆದೆಯ ಮುಂದೆ ಕೌ[illegible] (ಗೂಬೆ) ಬಂದರೇನು? ಕೇಸರಿ ಬಂದರೇನು?" *

ಇದೇ ಅಭಿಪ್ರಾಯವನ್ನು ಶ್ರೀಗಳವರು ತಮ್ಮ 'ಅಕ್ಕನ ಲಾವ[illegible] (೧೯೩೮)ಯಲ್ಲಿಯೂ ವ್ಯಕ್ತಪಡಿಸಿದ್ದಾರೆ.

"ಹೋಗೆಲೆ ಮಂತ್ರಿಯೆ! ಏನೆಂದೊಡೆನಾ ಭವಿಯನೊಲ್ಲೆ
ನೀಮಾತೇ[illegible]
ಸಾಗೆಲೆ ಸಚಿವನೆ! ಭಕ್ತರು ಭವಿಗಳು ಸರಿಯಲ್ಲೀ ಒಣಮಾತೇ[illegible]
ಜಗದೊಳು ತಿಳಿಯಲು ಬೆಳಕಿಗೆ ಕತ್ತಲೆಗೆಂದಾದರೂ ಕೂಟವುದು[illegible]
ಬಗೆಯಲು ಜಗದೊಳು ಎಷ್ಟಾದರೂ ಅರುವಿಗೆ
ಮರವೆಯ ಸಂಗವುದು[illegible]

* * * *

---

* "ಅಕ್ಕನ ಬಾಳು: ಶ್ರೀ ನಿಡುಮಾಮಿಡಿ ಶ್ರೀಗಳವರು. (ಪ್ರಟ [illegible]) ೧೯೩೫.

ವೀರಶೈವರ ಧರ್ಮತತ್ವವೆ ಶ್ರೇಷ್ಠವೆಂಬುದು ತೋರುತಾ
ಸಾರಿದಳು ಲಿಂಗಾಂಗಿ ಜಂಗಮ ಸಂಗವೇ ಸರಿಯೆನ್ನುತಾ ॥

ಮಹಾದೇವಿಯಕ್ಕನಿಗೆ ಮದುವೆಯಾಗಿತ್ತೇ ಎನ್ನುವ ಸಮಸ್ಯೆಯ ಕೂಲಂಕಷ ಚರ್ಚೆ ಸದ್ಯಕ್ಕೆ ಬೇಕಿಲ್ಲ. ಈ ವಿಷಯವನ್ನು ನಾನು ಬೇರೆ ಕಡೆ ಸಾಕಷ್ಟು ಚರ್ಚಿಸಿದ್ದೇನೆ.† ಮಹಾದೇವಿಯ ಮದುವೆಯ ವಿಷಯದಲ್ಲಿ ಇಷ್ಟು ಗೊಂದಲವೇಳುವುದಕ್ಕೆ ಆಕೆ ಶಿವಶರಣೆ, ಕೌಶಿಕ ಜೈನ ಎನ್ನುವ ಪ್ರಸ್ಥಾನವೇ ಮೂಲಕಾರಣ. ಕೌಶಿಕ ಜೈನನೆನ್ನುವುದಕ್ಕೆ ಸಾಕಷ್ಟು ಆಧಾರ ಗಳಿಲ್ಲ. ಮಹಾದೇವಿಯ ಕಾಲಕ್ಕೆ ಸಮೀಪಗತನಾದ ಹರಿಹರ (೧೨೧೬) 'ಹೊಂಗಡದ ಲಿಂಗವಂತೆ'ಯಾದ ಮಹಾದೇವಿಗೂ, ಕೌಶಿಕನಿಗೂ ವಿವಾಹ ವಾದುದನ್ನು ವರ್ಣಿಸಿದ್ದಾನೆ. ಮಹಾದೇವಿಯ ಕಾಲಕ್ಕೆ ದೂರದವನಾದ ಚಾಮರಸ (೧೪೩೦) ಮದುವೆಯಾಗಿರಲಿಲ್ಲವೆನ್ನುತ್ತಾನೆ. ಚಾಮರಸನ ತರುವಾಯ ಬಂದ ಚನ್ನಬಸವಾಂಕ, (೧೫೫೦) ಚಾಮರಸನನ್ನನುಸರಿಸದೆ ಹರಿಹರನನ್ನನುಸರಿಸುವುದು ಗಮನಾರ್ಹವಾಗಿದೆ.

ಹರಿಹರನೇ ಪರಮನಿಷ್ಠನಾದ ವೀರಶೈವ. ಕೌಶಿಕ ಜೈನನಾಗಿದ್ದರೆ ಮಹಾದೇವಿಯಕ್ಕನಿಗೆ ಅವನೊಂದಿಗೆ ವಿವಾಹವಾಗಿತ್ತೆಂದು ಹೇಳಲು ಹರಿಹರ ಒಪ್ಪುತ್ತಿದ್ದನೇ ?

ಮಹಾದೇವಿಯ ಮದುವೆಯಾದ ಕಾಲದಲ್ಲಿ ಆಕೆ ಬಸವಾದಿ ಪ್ರಮಥರ ಪ್ರಭಾವಕ್ಕೆ ಒಳಗಾಗಿರಲಿಲ್ಲವೆನ್ನುವುದೂ ಗಮನಿಸಬೇಕಾದ ವಿಷಯ. ಪ್ರಾಪಂಚಿಕ ವಿವಾಹದಲ್ಲಿ ಬೇಸತ್ತ ಮಹಾದೇವಿಯ ಮನಸ್ಸು ಆಧ್ಯಾತ್ಮಿಕ ವಿವಾಹದ ಕಡೆಗೆ ಹೋಯಿತೆಂದು ಭಾವಿಸುವುದು ಸೂಕ್ತವಾಗಿ ತೋರುತ್ತದೆ.

---

† "ಅಕ್ಕಮಹಾದೇವಿಯ ಆಧ್ಯಾತ್ಮಿಕ ಪ್ರಗತಿ: ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ ಗ್ರಂಥದಲ್ಲಿ– ಪುಟ ೧೩೪.

SISTER MAHADEVI: journal of the Literary Committee L. E. Association -- Dharwar.

ಮಹಾದೇವಿಯಕ್ಕನ ಕಾಲದಲ್ಲಿ ಒಳಜಾತಿಯ ವಿವಾಹಗಳು, ಮಿಶ್ರ ವಿವಾಹಗಳು ರೂಢಿಯಲ್ಲಿದ್ದವು. ಮತಾಂತರ ಮಾಡಿಕೊಳ್ಳುವುದೂ ಸರ್ವ ಸಾಧಾರಣವಾಗಿತ್ತು. ಒಂದೇ ಕುಟುಂಬದಲ್ಲಿ ನಾಲ್ಕಾರು ಧರ್ಮಗಳನ್ನನು ಸರಿಸುತ್ತಿದ್ದವರು ಇರುತ್ತಿದ್ದರು.

ವೀರಶೈವ ಲೇಖಕರು ಕೌಶಿಕನನ್ನು ಖಳನಾಯಕ (Villain)ನಂತೆ ಕಾಣಿಸುತ್ತಿರುವುದರಲ್ಲಿ ಅರ್ಥವಿಲ್ಲ. ಮಹಾದೇವಿಯಲ್ಲಿ ಅನುರಕ್ತನಾಗಿ ತನ್ನ ಸರ್ವಸ್ವವನ್ನೂ ಆಕೆಯ ಪಾದಗಳಿಗರ್ಪಿಸಲು ಸಿದ್ಧನಾದುದು ಕೌಶಿಕನ ತಪ್ಪೇ? ಅವನ ಉತ್ಕಂಠ ಪ್ರಣಯಕ್ಕೂ ಮಹಾದೇವಿಯ ಆಧ್ಯಾತ್ಮಿಕ ಜೀವನಕ್ಕೂ ಸಾಮರಸ್ಯವೊದಗಲಿಲ್ಲ. ವಿಷಯಾಸಕ್ತನಾದ ಕೌಶಿಕ ಸಾಧಿಸಿದ ವಿವಾಹ ವಿಷಮವಿವಾಹವಾಯಿತು. ಆದರೆ ಮಹಾದೇವಿಯ ಬಗ್ಗೆ ಅವನು ಯಾವಾಗಲೂ ಅವಿಶ್ವಾಸ, ಅಗೌರವ ತೋರಿಸಿಲ್ಲ. ಮಹಾದೇವಿಯ ಮೇಲಿನ ಮೋಹದಿಂದ ಅವನು ತನ್ನ ರಾಜ್ಯ ಕೋಶಗಳನ್ನು ದುರ್ಲಕ್ಷಿಸಲು ಹಿಂಜರಿಯ ಲಿಲ್ಲ. ಕೌಶಿಕ ಮಹಾದೇವಿಯ ದಾಂಪತ್ಯ ಸಮಸ್ಯೆಯನ್ನು ಸಂಪ್ರದಾಯದ ಮತಪ್ರಕ್ರಿಯೆಗಳ ಕಣ್ಣಿಂದ ನೋಡಿದರೆ ಅರ್ಥವಾಗುವುದಿಲ್ಲ; ಅದನ್ನು ಫ್ರಾಯ್ಡನ ವಿಜ್ಞಾನನೇತ್ರಗಳಿಂದಲೇ ನೋಡಬೇಕು.

'ಅಕ್ಕನಬಾಳಿ'ನಲ್ಲಿ ಶ್ರೀಗಳವರು ತಮ್ಮ ಪ್ರಸ್ಥಾನವನ್ನು ಚೆನ್ನಾಗಿ ಸಮರ್ಥಿಸಿದ್ದಾರೆ. ಅಕ್ಕನ ಚರಿತ್ರೆಯನ್ನು ಈ ದೃಷ್ಟಿಯಿಂದ ಸ್ವಾರಸ್ಯವಾಗಿ ನಿರೂಪಿಸಿದ್ದಾರೆ.

ಮಹಾದೇವಿಯಕ್ಕನ ಗುರು ಯಾರು ಎನ್ನುವ ವಿಷಯವನ್ನು ಚರ್ಚಿಸುತ್ತಾ ಶ್ರೀಗಳವರು

"ಅಕ್ಕಗಳಾದರೂ ಅಜ್ಞಾನದ ಸಂಸಾರದಲ್ಲಿ ಸಿಕ್ಕಿ ತೊಳಲುತ್ತಿದ್ದರು. ಅದರ ಬಿಡುಗಡೆಗಾಗಿ ಅಂತಹ ಗುರುವಿನ ಮರೆಹೊಕ್ಕರು. ಮರೆಹೊಕ್ಕ ಮೇಲೆ ಗುರುವು ಏನನ್ನು ಮಾಡಿದನೆಂಬುದನ್ನು ಕ್ರಮವಿಡಿದು ಈ ವಚನ ದಲ್ಲಿ ಹೀಗೆ ಹೇಳಿಕೊಂಡಿದ್ದಾಳೆ.

ಶ್ರೀ ಗುರುಲಿಂಗದೇವರು ತಮ್ಮ ಹಸ್ತವ ತಂದು ಎನ್ನ ಮಸ್ತಕದ ಮೇಲೆ ಇರಿಸಿದಾಗಳೆ ಎನ್ನ ಭವಂ ನಾಸ್ತಿಯಾ

ಯಿತ್ತು. ಎನ್ನ ತನ್ನಂತೆ ಮಾಡಿದ. ಎನಗೆ ತನಗೆ ತೆರಹಿಲ್ಲ ದಂತೆ ಮಾಡಿ ತೋರಿದನು ನೋಡಾ! ತನ್ನ ಕರಸ್ಥಲದಲ್ಲಿ ಮಹಾಲಿಂಗವನೆನ್ನ ಕರಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಕರಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ ಮನಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಮನಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ ಭಾವಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಭಾವಸ್ಥಲ ದಲ್ಲಿದ್ದ ಮಹಾಲಿಂಗವನು ಎನ್ನ ಜ್ಞಾನಸ್ಥಲದಲ್ಲಿ ಮೂರ್ತಿ ಗೊಳಿಸಿದ. ಎನ್ನ ಜ್ಞಾನಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ ಸರ್ವಾಂಗದೊಳಹೊರಗೆ ತೆರಹಿಲ್ಲದಳವಡಿಸಿದ, ನಮ್ಮ **ಶ್ರೀ ಗುರುಲಿಂಗದೇವ!** ಚನ್ನಮಲ್ಲಿಕಾರ್ಜುನಾ.'

ಗುರುವು ತನ್ನ ಭವಭಾರವನ್ನು ಕೆಡಿಸಿ ತನ್ನ ತ್ರಿಕರಣಗಳಲ್ಲಿಯೂ ಸರ್ವಾಂಗದಲ್ಲಿಯೂ ಮಹಾಲಿಂಗವನ್ನು ಸ್ಥಾಪಿಸಿದನಲ್ಲದೆ ಅದರ ನಿಜವಾದ ನೆಲೆ-ಕಲೆಗಳನ್ನು ತಿಳಿಸಿಕೊಟ್ಟನೆಂದು ಹೇಳಿಕೊಂಡಿದ್ದಾಳೆ. ಅಂತಹ ಗುರುವೇ ನಿಜವಾದ ಗುರು. (ಈ ವಚನದಲ್ಲಿ ಶ್ರೀ ಗುರುಲಿಂಗದೇವನೆಂದು ಎರಡುಸಲ ಬರುತ್ತದೆ. ಬಹುಮಟ್ಟಿಗೆ ಮಹಾದೇವಿಯಕ್ಕನ ಗುರು ಈತನೆ ಇರಬಹುದೇ?)"

ಶ್ರೀಗಳವರು ಕೇಳಿರುವ ಪ್ರಶ್ನೆಗೆ ಮಹಾದೇವಿಯಕ್ಕನೇ ತನ್ನ ವಚನ ಗಳಲ್ಲಿ ಉತ್ತರವಿತ್ತಿದ್ದಾಳೆ.

"ಸಂಗನ ಬಸವಣ್ಣನ ಪಾದವ ಕಂಡೆನಾಗಿ ಎನ್ನಂಗ ನಾಸ್ತಿ
ಯಾಯಿತ್ತು.
ಚನ್ನಬಸವಣ್ಣನ ಪಾದವ ಕಂಡೆನಾಗಿ ಎನ್ನ ಪ್ರಾಣನಾಸ್ತಿ
ಯಾಯಿತ್ತು.
ಪ್ರಭುವೇ, ನಿಮ್ಮ ಶ್ರೀಚರಣಕ್ಕೆ ಶರಣೆಂದೆನಾಗಿ ಎನಗೆಅರುಹು
ಸ್ವಾಯತವಾಯಿತ್ತು.
ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣರ ಕರುಣವ ಪಡೆದೆನಾಗಿ
ಎನಗಾವ ಜಂಜಡವಿಲ್ಲವಯ್ಯ ಪ್ರಭುವೇ."

ತಾನು ಪ್ರಭುದೇವರ ತೊತ್ತಿನ ತೊತ್ತಿನ ಮರಿದೊತ್ತಿನ ಮಗಳಾದ ಕಾರಣ ಜ್ಞಾನ ಪ್ರಸಾದವ ಕೊಟ್ಟನೆಂದು ಹೇಳಿದ್ದಾಳೆ.

"ಒಡಲಿಲ್ಲದ, ನುಡಿ ಇಲ್ಲದ, ಕಡೆ ಇಲ್ಲದ ನಲ್ಲನ ಒಡಗೂಡಿ
ಸುಖಿಯಾದೆ ಕೇಳಿರಯ್ಯ.
ಓಸರಿಸೆನನ್ಯಕ್ಕೆ. ಆಶೆಮಾಡೆನು ಮತ್ತೆ ಭಿನ್ನ ಸುಖಕ್ಕೆ.
ಆರಳಿದು ಮೂರಾಗಿ, ಮೂರಳಿದು ಎರಡಾಗಿ, ಎರಡಳಿದು
ಒಂದಾಗಿ ನಿಂದೆನಯ್ಯ.
ಬಸವಣ್ಣ ಮೊದಲಾದ ಶರಣರಿಗೆ ಶರಣಾರ್ಥಿ.
ಪ್ರಭುವಿನಿಂದ ಕೃತಕೃತ್ಯಳಾದೆನು. ನಾನು ಮರೆಯಲಾಗದು.
ನಾನು ನಿಮ್ಮನರಸುವೆನೆಂದು ಎನ್ನನು ಚನ್ನಮಲ್ಲಿಕಾರ್ಜುನನ
ಬೆರಸೆಂದು ಹರಸುತಿಹುದು."

ಕಲ್ಯಾಣದ ಕ್ರಾಂತಿಯ ಮುನ್ನ ಬೇರೆಬೇರೆ ಕಡೆ ಶರಣರ ತಂಡಗಳು ಹೊರಟವು. ಪ್ರಭುವಿನ ಜತೆಗೆ ಕೆಲವು ಶರಣರು ಶ್ರೀ ಶೈಲದತ್ತ ಹೊರಟರು. ಪ್ರಭುವನ್ನನುಸರಿಸಿ ಹೋದವರಲ್ಲಿ ಮಹಾದೇವಿಯಕ್ಕನೂ ಒಬ್ಬಳು.

ಈ ಪ್ರಮಾಣಗಳಿಂದ ಅಲ್ಲಮಪ್ರಭುವೇ ಮಹಾದೇವಿಯ ಗುರುವಾಗಿರ ಬೇಕೆಂದು ನನ್ನ ಭಾವನೆ.

ಮಹಾದೇವಿಯಕ್ಕನ ಆಧ್ಯಾತ್ಮಿಕ ಹಾಗೂ ಕಾವ್ಯ ತೇಜಸ್ಸನ್ನು ಶ್ರೀಗಳವರು ಬಹಳ ಮಾರ್ಮಿಕವಾಗಿ ಸೂಚಿಸಿದ್ದಾರೆ

"ಹೀಗೆ ಅಕ್ಕನು ನಡೆದುಹೋದ ಬಟ್ಟೆಯು ನಮಗೆ ಆದರ್ಶವಾಗಿ ದ್ದಂತೆ, ಅವಳು ನುಡಿದ ಭಾಷೆಯೂ ಆದರ್ಶವಾಗಿದೆ, ಚಿತ್ತಾಕರ್ಷಕವಾಗಿದೆ, ಭಾವಪೂರ್ಣವಾಗಿದೆ. ಆದುದರಿಂದ ಅದನ್ನು ಕಣ್ಮರೆಮಾಡಿ ಮುಂದಕ್ಕೆ ಹೋಗುವಂತಿಲ್ಲ.

ಸ್ವಾರ್ಥಸಂಕುಚಿತಗಳಿಂದ, ವಿಷಯ ವ್ಯಾಮೋಹಗಳಿಂದ ಸಂಕಲಿತ ವಾಗದ, ವ್ಯಾಪಕವಾದ – ವ್ಯಾಮೋಹರಹಿತವಾದ ಉಚ್ಚ ಜೀವನದಲ್ಲಿ ಒಂದು ಅಮೋಘವಾದ ಆತ್ಮಶಕ್ತಿಯು ತಲೆದೋರುತ್ತದೆ. ಆ ಆತ್ಮಶಕ್ತಿಯೇ ಅಮರವಾದ ಕವಿವಾಣಿಯಾಗಿ ಹೊರಹೊಮ್ಮುತ್ತದೆ. ಅಂತಹ ಕವಿ ವಾಣಿಯೇ ಭಾವಪೂರ್ಣವಾಗುತ್ತದೆ; ಅದು ಜನಮನವನ್ನು ತನ್ನತ್ತಸೆಳೆದು ಅಚ್ಚ ಹೊಸ ಜೀವನದಲ್ಲಿ ಇರಿಸುತ್ತದೆ. ಅದರಿಂದ ಆತ್ಮಯೋಚನೆ – ಆನಂದ ಯಾಚನೆಗಳಿಗೆ ಅವರವರ ಅಂತರಂಗಗಳು ಎಡೆಯಾಡುತ್ತವೆ. ಮನಸ್ಸಿನ

ವೃತ್ತಿಗಳೆಲ್ಲಾ ಮಾರ್ಪಟ್ಟು ಚೇತರಿಸಿಕೊಳ್ಳುತ್ತವೆ. ಹೀಗೆ ಜನಾಂಗದ ಜೀವನವನ್ನು ಮಾರ್ಪಡಿಸುವುದೇ ಮಹಾಕಾವ್ಯ. ಆ ಕಾವ್ಯದ ಬೆಳಸು ಹೆಚ್ಚೆಳೆಸಾಗುತ್ತದೆ. ಕೀರ್ತಿಫಲವು ಅದನ್ನು ತಬ್ಬಿಕೊಳ್ಳುತ್ತದೆ. ಅಂತಹ ಕಾವ್ಯವನ್ನು ಕಟ್ಟುವವನೇ ನಿಜವಾದ ಕವಿ, ಮಹಾಕವಿ. ಆತನು ಋಷಿಕವಿ. ಆಗ 'ನಾ ಋಷಿಃ ಕುರುತೇಕಾವ್ಯಂ' ಎಂಬ ಆತ್ಮವೀರ ಕವಿಗಳ ಅಮರ ವಾಣಿಯು ಅವನಿಗೆ ಒರೆಗಲ್ಲಾಗಿ ನಿಲ್ಲುತ್ತದೆ.

ನಮ್ಮ ಅಕ್ಕನು ಈ ಪಂಕ್ತಿಗೆ ಸೇರಿದವಳು. ಅವಳು ಮಹಾಋಷಿ ಕವಯಿತ್ರಿ. ತಮ್ಮ ಕಾವ್ಯವಾಣಿಯಿಂದ ಜನರ ಹೃದಯವನ್ನು ಆಕರ್ಷಿಸುವ ಉದ್ದಾಮ ಕವಿಗಳ ಪಂಕ್ತಿಯಲ್ಲಿ ಅಕ್ಕನಿಗೂ ಒಂದು ಸ್ಥಾನವಿದೆ. ಅನರ ಜೊತೆಗೆ ಆಧ್ಯಾತ್ಮಿಕವಾದ ಆಳವಾದ ತಿಳಿವನ್ನು ತಿಳಿಸುವ ಋಷಿಕವಿಗಳ ಲ್ಲಿಯೂ ಒಂದು ಮಾನ್ಯತೆ ಇದೆ. ಏಕೆಂದರೆ ಅಕ್ಕನ ಗ್ರಂಥಗಳು ಕೇವಲ ಶಾಬ್ದಿಕ ರಮ್ಯತೆಯಿಂದೊಡಗೂಡದೆ ಹಾರ್ದಿಕ ರಮ್ಯತೆಯಿಂದಲೂ ಕೂಡಿವೆ. ಅವು ಅವಳು ಸರಸ್ವತಿಯ ಸೇವೆಯನ್ನು ಮಾಡಬೇಕೆಂದು ಭಾವಿಸಿ ಹೇಗೋ ಬರೆದ ಗ್ರಂಥಗಳಲ್ಲ. ಅವಳ ಹೃದಯವುಕ್ಕಿಸೂಸಿ ಹರಿದುಬಂದವುಗಳು. ಆದುದರಿಂದ ಅವಳು ಅವುಗಳಲ್ಲಿ ಪ್ರತಿಪಾದಿಸುವುದು ಕೇವಲ ಜೀವಜೀವರ ಅಲ್ಪಸುಖವನ್ನಲ್ಲ, ದೇವದೇವನ ಅನಲ್ಪವಾದ ಸುಖ. ಜೀವರಸವು ಕ್ಷಣಿಕ ವಾದುದು, ದೇವರಸವು ಶಾಶ್ವತವಾದುದು. ಜೀವರಸಾಸ್ವಾದವು ಶೃಂಗಾರ ದಲ್ಲಿ ನಿಲುಕುವಂತಹುದು, ದೇವರ ಸಾಸ್ವಾದವು ಭಕ್ತಿಯಲ್ಲಿ ಲಭ್ಯವಾಗುವಂತ ಹುದು. ಶೃಂಗಾರರಸವು ಸರ್ವಸಾಮಾನ್ಯರ ಸೊತ್ತು, ಭಕ್ತಿರಸವು ಋಷಿಕವಿಗೆ ಮಾತ್ರ ಸಿಕ್ಕುವಂತಹುದು. ಅಕ್ಕನು ಆ ಭಕ್ತಿಯಲ್ಲಿ ಹಾಡಿವಳು, ಆ ದೇವನಲ್ಲಿ ಕೂಡಿದಳು.

"ಎನ್ನ ಮನವ ಸೂರುಗೊಂಡನವ್ವಾ !
ಎನ್ನ ತನುವ ಸೂರೆಗೊಂಡನವ್ವಾ !
ಎನ್ನ ಸುಖವನ್ನಪ್ಪುಗೊಂಡನವ್ವಾ !
ಎನ್ನಿರವ ನಿಂಬುಗೊಂಡನವ್ವಾ !
ಚನ್ನಮಲ್ಲಿಕಾರ್ಜುನನ ಒಲುಮೆಯುವಳಾಸು."

ಹೀಗೆ ಸಾಯದ ಕೆಡದ ಚಲುವ ಗಂಡನೊಲುಮೆಯವಳಾಗಿ ಮಾತಾ

ಡಿದ ಮಾತುಗಳು ಯಾರ ಹೃದಯವನ್ನು ತಟ್ಟಲಿಕ್ಕಿಲ್ಲ, ಮುಟ್ಟಲಿಕ್ಕಿಲ್ಲ, ಮುಟ್ಟಿ ಮಾರ್ಪಡಿಸಲಿಕ್ಕಿಲ್ಲ? ಅವಳ ಹೃದಯವು ಪಕ್ವವಾದಂತೆ ಅವಳ ನುಡಿಯೂ ಹದಗೊಂಡಿತ್ತು. ಅಂತೆಯೇ ಅವಳ ನುಡಿಯು ಎಲ್ಲರ ಮನಸ್ಸನ್ನು ಸಂತೊಷಗೊಳಿಸುವಂತೆ ಅವಳ ನುಡಿಯೂ ಎಲ್ಲರ ಕರ್ಣಗಳನ್ನು ತಣಿಸುತ್ತದೆ, ತನ್ನತ್ತ ಸೆಳೆಯುತ್ತದೆ. ಅವಳ ವಚನಗಳನ್ನು ಓದಿದಷ್ಟೂ ಆನಂದ, ಸಂತೋಷ: ಅವನ್ನು ಮತ್ತೂ ಮತ್ತೂ ಓದಬೇಕೆಂಬ ಆಶೆಯು ಬಲವಾಗುತ್ತದೆಯೇ ಹೊರ್ತು ತೃಪ್ತಿಯಿಲ್ಲ. ಅವಳ ವಚನವು ಬೆಲ್ಲದ ಅಚ್ಚು, ಅಮೃತದ ಫಲ.

ಅಕ್ಕನದು ಕೇವಲ ಕವಿವಾಣಿಯಲ್ಲ, ಕಾವ್ಯಮಯ ಜೀವನ. ಅವಳು ಕೇವಲ ಕಾವ್ಯಕಾರಿಣಿಯಲ್ಲ, ಕಾವ್ಯಕರ್ತೃವೂ ಆಗಿದ್ದಾಳೆ. ಕೇವಲ ಕಾವ್ಯವನ್ನು ಕಟ್ಟುವ ಕವಿಯು ಜನಾಂಗದ ಜೀವನಕ್ಕೆ ಆದರ್ಶನಾಗನು, ಕಾವ್ಯ ಪ್ರಪಂಚದಲ್ಲಿ ಮಾತ್ರ ಆದರ್ಶನು. ಅಕ್ಕನು ಮಾತ್ರ ಎರಡರಲ್ಲಿಯೂ ಆದರ್ಶಳಾಗಿದ್ದಾಳೆಂಬುದು ಹೆಮ್ಮೆಯ ವಿಷಯ. ಅದರಲ್ಲಿಯೂ ಸ್ತ್ರೀಯರಿಗೆ. ಆದುದರಿಂದ ಅಕ್ಕನದು ಬರೀ ಕವಿವಾಣಿಯಲ್ಲ ಕಾವ್ಯಜೀವನ. ಆದುದರಿಂದಲೇ ಚನ್ನಬಸವಣ್ಣನಂತಹ ಮಹಾಜ್ಞಾನಿಯು—'ಅಜಕೋಟಿ ವರುಷದವರೆಲ್ಲರೂ ಹಿರಿಯರೇ?' 'ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ' ಎಂಬ ಈ ಎರಡು ವಚನಗಳಿಂದ ಅಕ್ಕನ ಬಾಳು—ಬಟ್ಟೆ—ಭಾಷೆಗಳ ಹಿರಿಮೆಯನ್ನು ಹಾಡಿಕೊಂಡಿದ್ದಾನೆ. ಇವಕ್ಕಿಂತಲೂ ಹೆಚ್ಚು ನಾನೇನೂ ಹೇಳಲಾರೆ, ಹೇಳುವುದಿಲ್ಲ."

ಮಹಾದೇವಿಯಕ್ಕ ವಚನಗಳನ್ನಲ್ಲದೆ 'ಅಷ್ಟಾಂಗಯೋಗಕ್ಕಿಂತಲೂ ಇಷ್ಟಲಿಂಗಯೋಗವು ಸ್ವಾರಸ್ಯವೂ ರಹಸ್ಯಪೂರ್ಣವೂ ಆಗಿದೆ ಎಂದು ಪ್ರತಿಪಾದಿಸುವ' ಯೋಗಾಂಗ ತ್ರಿವಿಧಿಯನ್ನೂ ಸೃಷ್ಟಿಯ ವಚನ, ಅಕ್ಕಗಳ ಪೀಠಿಕೆಯನ್ನೂ ಬರೆದಿದ್ದಾಳೆ.

ಉಪಲಬ್ಧವಿಲ್ಲದ 'ಯೋಗಾಂಗ ತ್ರಿವಿಧಿ'ಯನ್ನು ದೊರಕಿಸಿ, ಪರಿಷ್ಕರಿಸಿ ಪ್ರಕಟಿಸಿ ಶ್ರೀಗಳವರು ಕನ್ನಡ ಸಾಹಿತ್ಯಸೇವಕರಿಗೆ ಮಹೋಪಕಾರ ಮಾಡಿದ್ದಾರೆ. 'ಯೋಗಾಂಗ ತ್ರಿವಿಧಿ'ಯನ್ನು ಕುರಿತು ಅವರು

'ಅಕ್ಕನು ವಿರತಿಸಂಪನ್ನಳಾದರೂ ಯೋಗದಲ್ಲಿ ನುರಿತ ಅರಿತ ಮಹಾಯೋಗಿಣಿ. ಅವಳು ಹಠಯೋಗಿಣಿಯಲ್ಲ; ಪರಾತ್ಪರ ಶಿವಯೋಗಿಣಿಯು. ಅವಳು ತನುವನ್ನು ತೊಳಲಿಸುವ ಅಷ್ಟಾಂಗ ಯೋಗವನ್ನು ಮಾಡಲಿಲ್ಲ. ಇಷ್ಟಲಿಂಗ ಯೋಗವನ್ನು ಬಿಡಲಿಲ್ಲ. ಪ್ರಾಣಾಯಾಮವನ್ನು ಆದರಿಸಲಿಲ್ಲ. ಪ್ರಾಣ ಲಿಂಗಾರ್ಚನೆಯನ್ನು ಪರಿಹರಿಸಲಿಲ್ಲ. ಆ ಶಿವಯೋಗಾನಂದ ಸಾಗರದ ಮುಂದೆ ಈ ಹಠಯೋಗ ಸುಖವು ಒಂದು ಮಂಜುಕಣದಂತೆ ಅವಳಿಗೆ ಪರಿಣಮಿಸಿತ್ತು. ಆದುದರಿಂದಲೇ ಯೋಗಾಂಗ ತ್ರಿವಿಧಿಯೆಂಬ ಒಂದು ಸ್ವತಂತ್ರ ಗ್ರಂಥವನ್ನೇ ಬರೆದಳು. ಅದರಲ್ಲಿ ಕೆಲವನ್ನು ಇಲ್ಲಿ ಅವಗಾಹನೆಗೆ ತಂದುಕೊಳ್ಳುವುದು ಒಳ್ಳೆಯದು.

ಯೋಗಿ ಯಾರು ?

ಆಕಾಶದೊಳಗಣ । ಜ್ಯೋತಿಯಾ ಪ್ರಭೆ ಬಂದು ।
ಲೋಕಂಗಳೊಳಗೆ ಮುಸುಗಲು ಅದಕಂಡು ।
ಏಕಾಂಗಿಯಾದಡವ ಯೋಗಿ ॥

ನಿಜವಾದ ಯೋಗವಾವುದು ?

ಅಷ್ಟವರ್ಣದ ಹಣ್ಣು । ಬಟ್ಟಬಯಲೊಳಗಿರಲು ।
ಅಷ್ಟಾಂಗಯೋಗಗಳ ಮಾಡಿ ಬಳಲುವರು ।
ದೃಷ್ಟಿಯಲಿ ಇರುವದನು ಮರೆದು ॥

ಅಕ್ಕನು ಆಚರಿಸಿದ ಯೋಗವೆಂತಹದು ?

ನಡೆವೆ ಲಿಂಗದ ಕೂಡೆ । ನುಡಿವೆ ಲಿಂಗದ ಒಡನೆ ।
ಎಡವಿಡದೆ ಬರ್ಪ ವಿಷಯಭೋಗಗಳನ್ನು ।
ಕೊಡುವೆನೈ ಲಿಂಗಮುಖದಿಂದ ॥

ಕೋಟಿ ರವಿ ಶಶಿಗಳ್ಗೆ । ಮೀಟಾದ ಪ್ರಭೆ ಬಂದು ।
ನಾಟಿತ್ತೈ ಎನ್ನ ಮನದೊಳಗದರಿಂದ ।
ದಾಟಿದೆನೊ ಭವದ ಕೊಳಗಳ ॥

ಅಕ್ಕನವರ ಯೋಗದ ಈ ಪರಿಪಕ್ವ ವಿಚಾರವನ್ನು ಕೇಳಿ ಯೋಗಾ

ಚಾರ್ಯನಾದ ಪತಂಜಲಿಯೂ ಸಹ ತನ್ನ ಯೋಗದರ್ಶನಕ್ಕೆ ತಿಲಾಂಜ
ಯನ್ನು ಬಿಟ್ಟು ಬದ್ಧಾಂಜಲಿಯಾಗಿ ನಿಲ್ಲಬೇಕು.' *

ಎಂದು ಹೇಳಿರುವ ಮಾತು ಸ್ವಲ್ಪ ತೂಕ ತಪ್ಪಿದೆ. ವೇದ, ಪುರಾ
ಸ್ಮೃತಿಗಳ ಬಗೆ ಅವರು ಹೇಳಿರುವ ಮಾತೂ† ತುಂಬ ವಿವಾದಾಸ್ಪದವಾಗಿ
ಈ ಮಾತುಗಳನ್ನು ಬರೆಯುವಾಗ ಶ್ರೀಗಳವರ ವಯಸ್ಸು ಇಪ್ಪತ್ತೈ
ಪಾಂಡಿತ್ಯ ದೊರಕಿಸಿಕೊಂಡದ್ದಾಗಿತ್ತೇ ವಿನಾ ಅದು ಕಳಿತು ಅನುಭವ
ಗಿರಲಿಲ್ಲ. ವಾತಾವರಣ, ವಯೋಧರ್ಮಕ್ಕನುಗುಣವಾದ 'ಕಟ್ಟಾವೀ
ಶೈವತ್ವ'ವೂ ನೆಲೆಯಾಗಿ ನಿಂತಿತ್ತು. ಶ್ರೀಗಳವರ ಅಂತರಂಗ ಪರಿಶು
ವಾದುದರಿಂದ ಅವರು ಬಹುಬೇಗ ಈ ಸಂಕುಚಿತ ವಾತಾವರಣದಿಂದ ಹೊ
ಬಂದು ಸತ್ಯ - ಜ್ಞಾನ - ಶಕ್ತಿ - ಸೌಂದರ್ಯದ ನಿತ್ಯ ಆರಾಧಕರಾಗಲು ಅ
ಕೂಲವಾಯಿತು. 'ಅಕ್ಕನ ಬಾಳು' ಗ್ರಂಥದಿಂದ 'ವಚನಮಂಜರಿ'ಯವ
ಅವರು ಪ್ರಗತಿಪಥದಲ್ಲಿ ಮುಂದಡಿಯಿಡುತ್ತಿರುವುದು ಕಾಣಬರುತ್ತ
'ಕಟ್ಟಾ ವೀರಶೈವತ್ವ' ವಿಶ್ವಬಾಂಧವ್ಯ, ವಿಶ್ವಧರ್ಮ, ವಿಶ್ವಜ್ಞಾನದ ಕಡೆ
ಸಾಗುತ್ತಿರುವುದನ್ನು ನಾವು ಕಾಣಬಹುದು.

---

* ಅಕ್ಕನ ಬಾಳು : ಪುಟ ೫೭

† ,, ,, , ಪುಟ ೫೮

# ೨. ಚನ್ನಬಸವಣ್ಣ

ಹನ್ನೆರಡನೆಯ ಶತಮಾನದ ವೀರಶೈವ ನವೋದಯ ಕಾಲದಲ್ಲಿ ಬೆಳಗಿದ ಜ್ಯೋತಿಗಳಲ್ಲಿ ಚನ್ನಬಸವಣ್ಣ ಸಾಧಕ ಶ್ರೇಷ್ಠನಾಗಿದ್ದುದು ಮಾತ್ರವೇ ಅಲ್ಲದೆ ಸಮಾಜ ಸುಧಾಕರನೂ, ನೂತನ ಸಮಾಜ ನಿರ್ಮಾಪಕನೂ ಆಗಿದ್ದಾನೆ. ಕ್ರಿಸ್ತಧರ್ಮ ಶುದ್ಧಸ್ವರೂಪದಲ್ಲಿ ನಿಲ್ಲುವುದಕ್ಕೆ ೧೫-೧೬ನೆಯ ಶತಮಾನಗಳಲ್ಲಿ ಮಾರ್ಟಿನ್ ಲ್ಯೂಥರ್ ಮಾಡಿದ ಕೆಲಸವನ್ನು ವೀರಶೈವ ಧರ್ಮಕ್ಕೆ ಚನ್ನಬಸವಣ್ಣ ಮಾಡಿದ್ದಾನೆ. ಭಾವುಕ ಬಸವಣ್ಣ ವೀರಶೈವ ಧರ್ಮದ ಬಗ್ಗೆ ಜನತೆಯಲ್ಲಿ ಅಭೂತಪೂರ್ವ ವಿಶ್ವಾಸ ಹುಟ್ಟುವುದಕ್ಕೆ ಕಾರಣ ಕರ್ತನಾದ. ಆದರೆ ಜನತೆಯ ವಿಶ್ವಾಸ, ವೀರಶೈವದ ಬಗ್ಗೆ ಅವರಲ್ಲಿ ಹುಟ್ಟಿದ್ದ ಆದರ ಗೌರವಗಳು ಕ್ರಿಯಾರೂಪ ಪಡೆದು ಸಂಘಟಿತವಾಗಬೇಕಾಗಿತ್ತು. ಜ್ಞಾನ ಭಾಸ್ಕರನಾದ ಚನ್ನಬಸವಣ್ಣ ಆ ಕೆಲಸವನ್ನಾಗ ಕೈಗೊಳ್ಳದಿದ್ದರೆ ವೀರಶೈವ ಧರ್ಮ, ಸಮಾಜ ಒಂದು ವಿಶಿಷ್ಟ ಸ್ವರೂಪ ಪಡೆಯಲು ಸಾಧ್ಯವಾಗುತ್ತಿರಲಿಲ್ಲ.

ಅನುಭವಮಂಟಪದ ಶರಣ ಸಂಕುಲದಲ್ಲಿ ಚನ್ನಬಸವಣ್ಣ ವಯಸ್ಸಿನಿಂದ ಬಹಳ ಸಣ್ಣವನು; ಯೋಗ್ಯತೆಯಿಂದ ಬಹಳ ದೊಡ್ಡವನು. ಅವನನ್ನು ಕುರಿತು ಅಲ್ಲಮಪ್ರಭು, ಬಸವಣ್ಣ ಆಡಿರುವ ಮಾತುಗಳಿಂದ ಅವನ ಯೋಗ್ಯತೆ ಎಂಥದೆಂಬುದು ಮನವರಿಕೆಯಾಗುತ್ತದೆ.

ಅಲ್ಲಮಪ್ರಭು :

'ಕಿರಿಯರಾದಡೇನು ? ಹಿರಿಯರಾದಡೇನು ?
ಅರಿವಿಂಗೆ ಹಿರಿದು ಕಿರಿದುಂಟೆ ?
ಆದಿ ಅನಾದಿ ಇಲ್ಲದಂದು
ಅಜಾಂಡ ಬ್ರಹ್ಮಾಂಡ ಕೋಟಿಗಳುದಯವಾಗದಂದು
ಗುಹೇಶ್ವರ ಲಿಂಗದಲ್ಲಿ ನೀನೊಬ್ಬನೆ ಮಹಾಜ್ಞಾನಿ ಎಂಬುದು
ಕಾಣಬಂದಿತ್ತು ಕಾಣಾ ಚನ್ನಬಸವಣ್ಣ'

'ಕಾಯವಿಡಿದು ಹುಟ್ಟಿದಾತ ಕಾಲಾಗ್ನಿರುದ್ರನಾಗಲಿ,
ಕಾಯವಿಡಿದು ಹುಟ್ಟಿದಾತ ಕಾಮಸಂಹಾರನಾಗಲಿ,
ಕಾಯವಿಡಿದು ಹುಟ್ಟಿದಾತ ಅನಾದಿ ಪರಮೇಶ್ವರನಾಗಲಿ,
ಅರಿವು ಸಾಧ್ಯವಾಗದು ಆವರಿಗೆಯು.
ಗುಹೇಶ್ವರ ಲಿಂಗದಲ್ಲಿ ನೀನು ಕಾಯವಿಡಿದು ಕಲ್ಪಿತವ ಹೊದ್ದೆ
ಎಂಬುದು ಕಾಣಬಂದಿತ್ತು ನೋಡಾ ಚನ್ನಬಸವಣ್ಣ.'

'ಅಂಗವೆಂಬ ಸಂಸಾರದೊಳಗೆ ಸವೆದರೆಲ್ಲರು.
ಶಿವನನರಿವರೆ ಮನವೆಂಬ ಸಂಕಲ್ಪದ ಕುಣಿಗೆ ಒಳಗಾದರೆಲ್ಲರು.
ಮಾಯೆಯ ಹೊಡೆಗಿಚ್ಚು ಗೆಲಬಲ್ಲರೆ
ಗುಹೇಶ್ವರ ಲಿಂಗದಲ್ಲಿ ಸರ್ವಸಂದೇಹವಳಿದಿಪ್ಪ
ಚನ್ನಬಸವಣ್ಣಂಗೆ ನಮೋ ನಮೋ ಎಂಬೆನು'

'ತಾನೆಂದೆನಲೊಲ್ಲದೆ ಗುರುವೆಂದು ಹಿಡಿದವನ,
ಗುರುವೆಂದಲ್ಲಿ ನೀನೆಂದು ನಡೆದವನ,
ನೀನೆಂದಲ್ಲಿಯೆ ಲಿಂಗಜಂಗಮದ ಸಕೀಲ ಸಂಬಂಧವ
ನೆಲೆಗೊಳಿಸಿದವನ,
ಲಿಂಗ ಜಂಗಮದಲ್ಲಿ ತನ್ನ ಮರೆದು, ಕರಿಗೊಂಡ ಲಿಂಗೈಕ್ಯನ
ಗುಹೇಶ್ವರ ಲಿಂಗದಲ್ಲಿಪ್ಪ ಚನ್ನಬಸವಣ್ಣನ ಶ್ರೀಪಾದಕ್ಕೆ
ನಮೋ ನಮೋ ಎಂಬೆನು'

'ನರಲೋಕದ ನರರುಗಳೆಲ್ಲರು ನರಸಂಸಾರಕ್ಕೊಳಗಾದರು.
ಸುರಲೋಕದ ಸುರರುಗಳೆಲ್ಲರು ಸುರಸಂಸಾರಕ್ಕೊಳಗಾದರು.
ಮುನಿಲೋಕದ ಮುನಿಗಳೆಲ್ಲರು ತಪೋಸಂಸಾರಕ್ಕೊಳಗಾದರು.
ಜಂಗಮವ ಪೂಜಿಸುವರೆಲ್ಲರು ಸಾಯುಜ್ಯಸಂಸಾರಕ್ಕೊಳಗಾದರು.
ರುದ್ರಲೋಕದ ರುದ್ರಗಣಂಗಳೆಲ್ಲರು ರುದ್ರಪದವೆಂಬ ಸಂಸಾರ
ಕ್ಕೊಳಗಾದರು.
ಲಿಂಗವ ಧರಿಸಿದವರೆಲ್ಲರು ಲಿಂಗಸಂಸಾರಕ್ಕೊಳಗಾದರು.
ಪಾದೋದಕ ಪ್ರಸಾದಿಗಳೆಲ್ಲರು ಪ್ರಸಾದ ಸಂಸಾರಕ್ಕೊಳಗಾದರು.
ಗುಹೇಶ್ವರಲಿಂಗದಲ್ಲಿ ಸರ್ವಸಂಸಾರ ವಿರಹಿತನು
ಚನ್ನಬಸವಣ್ಣಂಗೆ ನಮೋ ನಮೋ ಎಂಬೆನು'

'ಬೆಳಗುವ ಜ್ಯೋತಿಯ ತಿರುಳಿನಂತೆ,
ಹೊಳೆವ ಕಂಗಳ ಕಾಂತಿಯೊಳ ಹೊರಗೆನ್ನದೆ ಆಳವಟ್ಟು
ಶಿವಯೋಗಿಯ ಕಂಡೆ ನೋಡಾ.
ನಿಜ ಉಂಡ ನಿರ್ಮಳದ ಘನವಕಂಡು ಬೆರಗಾದೆ ನಾನು.
ಗುಹೇಶ್ವರಲಿಂಗದಲ್ಲಿ ಚನ್ನಬಸವಣ್ಣನಿಂದಲಾನು ಬದುಕಿದೆನು.'

ಬಸವಣ್ಣನಿಗೆ ಚನ್ನಬಸವಣ್ಣ ಸೋದರಳಿಯ; ಚಿರಂಜೀವಿ. ಅರಿವಿನ ಹಿರಿಮೆಯನ್ನು ಕಂಡಿದ್ದ ಬಸವಣ್ಣ ಚನ್ನಬಸವಣ್ಣನನ್ನು ಕಿರಿಯನೆಂದು ಕಡೆಗಾಣಿಸುವುದಿಲ್ಲ; ಅವನನ್ನು ಗುರುವೆಂದು ಆರಾಧಿಸುತ್ತಾನೆ.

'ಸಮರತಿ ಸಮಸಂಧಾನದ ಸಂಗಸುಖವು ನಿನ್ನಿಂದಲೆನಗೆ
ಸಾಧ್ಯವಾಯಿತ್ತಲ್ಲದೆ ಎನಗೆ ತೋರಿದವರಾರು ಹೇಳಾ
ಲಿಂಗೈಕ್ಯದ ಹೊಲಬ ?
ಕೂಡಲಸಂಗಮದೇವರ ಶರಣ ಪ್ರಭುದೇವರಲ್ಲಿ ನೀನೆನ್ನನಿರಿಸ
ದನ್ನಕ್ಕ ನಾನು ಬಲ್ಲೆನೇ ಹೇಳಾ ಚನ್ನಬಸವಣ್ಣ.'

'ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗಂಗಳು
ಭವರಾಟಳದಲಿ ತಿರುಗುತ್ತಿಪ್ಪಲ್ಲಿ
ಅನಂತ ಕೋಟಾನುಕೋಟಿ ಯುಗಂಗಳು ಮಡಿದುಹೋದವು.
ಅನಂತ ಜಲಪ್ರಳಯಂಗಳು ಸರಿಸರಿದು ಹೋದವು.
ಹದಿನಾಲ್ಕು ಲೋಕಂಗಳೆಂಬ ಅನಂತಕೋಟಿ ಬ್ರಹ್ಮಾಂಡಗಳೆಲ್ಲ
ಲಯವಾಗಿ ಹೋದವು.
ಇದರೊಳಗೆ ಆವ ಲೋಕದಲ್ಲಿ ಆವ ಯುಗದಲ್ಲಿ
ಪ್ರಾಣಲಿಂಗ, ಲಿಂಗ ಪ್ರಾಣವೆಂಬ ಭೇದವ ನರುಹಿದರು ಹೇಳಾ ?
ಗಂಗೆ ಗೌರೀವಲ್ಲಭರು ಮೊದಲಾದ ಅನಂತಕೋಟಿ ರುದ್ರಾದಿಗಳೆಲ್ಲರು
ಪ್ರಾಣಲಿಂಗ ಸಂಬಂಧದ ಹೊಲಬನರಿಯದೆ ಅಣಿಮಾಡಿ
ಚತುರ್ವಿಧ ಫಲಪ್ರಾಪ್ತಕ್ಕೆ ಒಳಗಾದರು.
ಶಿವಾಚಾರದ ವಿಚಾರವ ನರಿಯದೆ, ಜಗವು ಕೆಟ್ಟಹುದೆಂದು
ಪರಮ ಪುರುಷಾರ್ಥ ಕಾರಣವಾಗಿ,
ಮರ್ತ್ಯಲೋಕದಲ್ಲಿ ಅವತರಿಸಿ ಗುರುಲಿಂಗ ಜಂಗಮ ಪಾದೋದಕ
ಪ್ರಸಾದವೆಂಬ ಪಂಚಾಚಾರವ ನೆಲೆಗೊಳಿಸಿ,
ಷಟ್ಸ್ಥಲವೆಂಬ ಮಹಾನುಭಾವಮಂ ಕರತಳಾಮಳಕವಾಗಿ
ಸ್ಥಲಗೊಳಿಸಿ,

ಪ್ರಾಣ ಲಿಂಗ, ಲಿಂಗ ಪ್ರಾಣವೆಂಬ ಭೇದವನೆನಗೆ ತಿಳುಹಿ,
ಎನ್ನ ಭ್ರಾಂತಿ ಸೂತಕವ ಬಿಡಿಸಿ, ಲಿಂಗೈಕ್ಯವೆಂಬುದನೆನಗೆ
ತೋರಿದೆಯಾಗಿ
ನಿನ್ನಿಂದಲಾನು ಸಂಗನ ಬಸವಣ್ಣನೆಂಬ ಹೆಸರು ಪಡೆದೆನು.
ಕೂಡಲ ಸಂಗಮದೇವರು ಸಾಕ್ಷಿಯಾಗಿ, ಎನಗೆ ನೀನು
ಪರಮಾರಾಧ್ಯ, ಕಾಣಾ ಚನ್ನಬಸವಣ್ಣ.

ಇಂಥ ಮಹಿಮಾಶಾಲಿಯ ಮೇಲೆ ಕನ್ನಡದಲ್ಲಿ ಹೆಚ್ಚು ಸಾಹಿತ್ಯ ಬೆ[illegible] ದಿಲ್ಲ. ಚನ್ನಬಸವಣ್ಣನ ಮೇಲೆ ಆಧಾರ ಗ್ರಂಥವೆನಿಸಿಕೊಂಡಿರುವ ವಿರೂಪಾ[illegible] ಪಂಡಿತನ (ಕ್ರಿ. ಶ. ೧೫೮೪) 'ಚೆನ್ನಬಸವ ಪುರಾಣ'ವೂ† ಅವನ ಜೀವನ[illegible] ಬಗ್ಗೆ ಹೆಚ್ಚು ವಿಷಯಗಳನ್ನು ತಿಳಿಸುವುದಿಲ್ಲ. ನಿಡುಮಾಮಿಡಿ ಶ್ರೀಗಳವ[illegible] ತಮ್ಮ 'ಸಮ್ಯಜ್ಞಾನಿ ಚನ್ನಬಸವಣ್ಣ' ಗ್ರಂಥದಲ್ಲಿ ಚನ್ನಬಸವನ ಜೀವಿತವನ್ನು ಚರ್ಚಿಸುವುದಕ್ಕೆ ಹೋಗದಿದ್ದರೂ ಅವನ ಕೃತಿಗಳನ್ನೂ, ಉಪದೇಶವನ್ನು ಕೂಲಂಕಷವಾಗಿ ವಿವೇಚಿಸಿದ್ದಾರೆ.

ಅ) **ಮತಾಚಾರಗಳು:** "ಮತಾಚಾರಗಳಲ್ಲಿ ಷಟ್ಸ್ಥಲಾನುಭವ[illegible] ಚರಣೆಯೆ ಈ ವಚನದ ಮುಖ್ಯ ಗುರಿ. ಇದರಲ್ಲಿ ಒಂದು ಹೊಸಬಗೆಯನ್ನು ಬಯಲಿಗೆ ತಂದಿದೆ. ಹಳೆಯ ಸಂಪ್ರದಾಯಗಳನ್ನು ಅಲ್ಲೆಗಳೆದಿದೆ. ಮೆ[illegible] ಮೆಲ್ಲನೆ ಭಕ್ತ, ಮೆಲ್ಲಮೆಲ್ಲನೆ ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರ[illegible] ಐಕ್ಯ – ನಿರವಯನಾಗಬೇಕೆಂಬ ಬಸವಾದಿ ಶಿವಶರಣರ ವಾದವನ್ನು ಚನ್ನ ಬಸವಣ್ಣನು ಒಪ್ಪುವುದಿಲ್ಲ. ಹಾಗೆ ಹೇಳುವುದರಲ್ಲಿ ಭಿನ್ನತೆಯ ಕುರುಹ[illegible] ಭಕ್ತನಾಗಿ ಭಕ್ತಸ್ಥಲವನ್ನುಳಿದು ಮಹೇಶನಾಗುವುದು ಹೀಗೆಯೆ ಉತ್ತ[illegible]

---

†'ಸನ್ನುತ ಶಿವಪ್ರಸಾದವೆ ನಾಗಲಾಂಬಿಕೆಗೆ
ನನ್ನಿಯಿಂ ಶಿಶುವಾಗಿ ಜನಿಸಿ ಬಾಲ್ಯವನುಳಿದು
ಭಿನ್ನವಿಲ್ಲದೆ ಶಿವಗಣಕ್ಕೊಲಿದು ಸ್ಥಾವರಾದ್ಯನ್ಯಲಿಂಗದ ಭಜನೆಯ ॥
ಮುನ್ನಮೇ ಬಿಡಿಸಿ ಷಟ್ಸ್ಥಳ ಮಾರ್ಗಮಂ ತಿಳಿಸಿ
ಚೆನ್ನಾಗಿ ಪ್ರಾಣಲಿಂಗದ ನಲೆಯನರುಹಿಕೊ
ಟ್ಟುನ್ನತ ಸುಮುಕ್ತಿಯೊಳಗಿಂಬಿಟ್ಟ ಪರಮಗುರು
ಚೆನ್ನಬಸವಂಗೆ ಶರಣು
—ವಿರೂಪಾಕ್ಷ ಪಂಡಿತನ 'ಚೆನ್ನಬಸವಪುರಾಣ'-ಲಿಂಗಾಯತ
ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯಶಾಖೆ, ಧಾರವಾಡ

ರೋತ್ತರ ಒಂದಳಿದು ಮುಂದಳಿಯುತ್ತ ಹೋಗಬೇಕೆಂಬ ಅಭಿಪ್ರಾಯ ಉಂಟಾಗುತ್ತದೆ. ಇದು ಉಚಿತವಲ್ಲ. ಆಶ್ರಯಾಶ್ರಯಿಭಾವ ಇದರಲ್ಲಿ ಕಳಚಿಹೋಗುತ್ತದೆ. ಭಾವಸಾಮರಸ್ಯ ಮುಗುಚಿಹೋಗುತ್ತದೆ. ಆದುದರಿಂದ ಒಂದರಲ್ಲಿಯೇ ಎಲ್ಲವನ್ನೂ ಸಂಪಾದಿಸಬೇಕು. ಹೀಗಾದಲ್ಲಿ ಆಶ್ರಯಾಶ್ರಯೀಭಾವಕ್ಕೂ ಭಾವಪರಂಪರೆಯ ಸಮ್ಮಿಲನಕ್ಕೂ ಯಾವ ಕೊರತೆಯಿಲ್ಲ. ಯಾವ ಸ್ಥಲಕ್ಕೆ ಇನ್ನಾವ ಸ್ಥಲವೂ ಹೊರತಾಗುವಂತಿಲ್ಲ. ಅಲ್ಲದೆ ಇದು ಸರ್ವಸಾಮಾನ್ಯರಿಗೂ ದಕ್ಕುವ ರೀತಿ. ಒಂದಾದಮೇಲೆ ಮತ್ತೊಂದನ್ನೇರುವುದು ಮರುಜೀವಣಿ ಮತ್ತು ಚಿರಂಜೀವಿಗಳಿಗೆ ಮಾತ್ರ ಸಾಧ್ಯ! ಇದು ಎಲ್ಲರಿಗೂ ಶಕ್ಯವೆ ? ಒಂದರಲ್ಲಿಯೇ ಅದನ್ನು ಸಾಧಿಸದ ಭಕ್ತನ ಬಾಯಲ್ಲಿ ಹುಡಿ ಮಣ್ಣು ಹುಯ್ದು ಹೋಗನೆ ಚನ್ನನು, ಎಂಬುದಾಗಿ ಪ್ರಾರಂಭದ ವಚನದಲ್ಲಿಯೇ ಪ್ರಸ್ತಾಪಿಸಲಾಗಿದೆ.† ಇದೇ ಷಟ್‌ಸ್ಥಲದ ಕೊನೆಯ

---

† "ಮೆಲ್ಲಮೆಲ್ಲನೆ ಭಕ್ತನೆನಿಸಿಕೊಂಬೆ,
ಮೆಲ್ಲಮೆಲ್ಲನೆ ಮಹೇಶ್ವರನೆನಿಸಿಕೊಂಬೆ,
ಮೆಲ್ಲಮೆಲ್ಲನೆ ಪ್ರಸಾದಿ ಎನಿಸಿಕೊಂಬೆ,
ಮೆಲ್ಲಮೆಲ್ಲನೆ ಪ್ರಾಣಲಿಂಗಿ ಎನಿಸಿಕೊಂಬೆ,
ಮೆಲ್ಲಮೆಲ್ಲನೆ ಶರಣನೆನಿಸಿಕೊಂಬೆ,
ಮೆಲ್ಲಮೆಲ್ಲನೆ ಐಕ್ಯನೆನಿಸಿಕೊಂಬೆ,
ಮೆಲ್ಲಮೆಲ್ಲನೆ ಷಟ್ಸ್ಥಲನ ಮೀರಿ
ನಿರವಯಸ್ಥಲವನೆಯ್ದುವೆನೈಯ್ಯ ಕೂಡಲಸಂಗಮದೇವಾ."
"ಮೆಲ್ಲಮೆಲ್ಲನೆ ಭಕ್ತ,
ಮೆಲ್ಲಮೆಲ್ಲನೆ ಮಹೇಶ್ವರ
ಮೆಲ್ಲಮೆಲ್ಲನೆ ಶರಣ,
ಮೆಲ್ಲಮೆಲ್ಲನೆ ಐಕ್ಯನಾದೆನೆಂಬರು ನಿಮ್ಮ ಶರಣರು.
ತಾವೇನು ಮರುಜೀವಣಿಯು ಕೊಂಡಿದ್ದರೆ ?
ಅಮೃತಸೇವನೆಯ ಮಾಡಿದ್ದರೆ ?
ಆವಸ್ಥಲದಲ್ಲಿ ನಿಂದಿದ್ದರೂ ಆ ಸ್ಥಲದಲ್ಲಿ ಷಟ್ಸ್ಥಲವಾಗದಿದ್ದೊಡೆ,
ಆ ಭಕ್ತನ ಬಾಯಲ್ಲಿ ಹುಡಿಮಣ್ಣ ಹೊಯ್ದು ಹೋಗನೆ
ನಮ್ಮ ಕೂಡಲ ಚನ್ನಸಂಗಮದೇವ ?"

ಮುಖ್ಯವಾದ ಮಾರ್ಪಾಟು. ಇದೇ ಇದಕ್ಕೆ ಪರಿಪೂರ್ಣತೆ. ಈ ವಿಷ
ದಲ್ಲಿ ಹೆಚ್ಚು ಪ್ರಾವೀಣ್ಯತೆಯನ್ನೂ ಪರಿಪಕ್ವತೆಯನ್ನೂ ತೋರಪಡಿಸಿದ್ದಾ
ಚನ್ನಬಸವಣ್ಣ. ಇದು ಕಾರಣ ಈತನಿಗೆ 'ಷಟ್ಸ್ಥಲ ಚಕ್ರವರ್ತಿ' ಎ
ಬಿರುದನಿತ್ತು ಹರಸಿದರು ಶಿವಶರಣರು. ಇದು ಷಟ್‌ಸ್ಥಲದ ಸ್ಥಾಪನೆಯ
ಹೇಳುವುದಿಲ್ಲ; ಪ್ರಾವೀಣ್ಯತೆಯನ್ನು ಬಿತ್ತರಿಸುತ್ತದೆ."

ಆಧ್ಯಾತ್ಮಿಕ ಉತ್ಕ್ರಾಂತಿಯ ದೃಷ್ಟಿಯಿಂದ ಚನ್ನಬಸವಣ್ಣ
ವಿಚಾರಪ್ರವಾಹವನ್ನು ಹರಿಸಿ ವೀರಶೈವರಿಗೆ ಮಾತ್ರವೇ ಅಲ್ಲ – ಸಕಲ ಸಾ
ಕರಿಗೂ ಮಹೋಪಕಾರಮಾಡಿದ್ದಾನೆ. ಷಟ್ಸ್ಥಲಗಳಲ್ಲಿ ಯಾವದಾ
ರೊಂದನ್ನು ತನ್ನ ಉತ್ಕ್ರಾಂತಿಯ ಬೀಜವನ್ನಾಗಿ ಮಾಡಿಕೊಂಡು, ಅ
ಮೂಲಕ ಉಳಿದ ಸ್ಥಲಗಳನ್ನೂ ಆವಿರ್ಭಾವಮಾಡಿಕೊಳ್ಳಬಹುದೆಂಬ ಸಂದೇ
ಅಲ್ಪಾಯುಗಳಾದ ಮಾನವರಲ್ಲಿ ಹೆಚ್ಚಿನ ಧೈರ್ಯ, ನಂಬಿಕೆ, ಆಸ್ಥೆ
ಹುಟ್ಟಿಸುತ್ತದೆ.

ಆ) ಭವಿಗಳೆಷ್ಟುವಿಧ?: "ಈ ವಚನದಲ್ಲಿ ಭವಿತನವು ಹುಟ್ಟು
ಭವಿ, ಕೆಟ್ಟಭವಿ ಎಂಬುದಾಗಿ ಎರಡು ತೆರನಾಗಿ ಎಣಿಸಲಾಗಿದೆ. ಹುಟ್ಟುಭ
ಯಾರೆಂಬುದು ವೀರಶೈವರಿಗೆಲ್ಲರಿಗೂ ತಿಳಿದ ವಿಷಯವೆ ಆದರೆ ಕೆಟ್ಟಭ
ಯಾರೆಂಬುದನ್ನು ಕೆಳಗಿನ ವಚನದಿಂದಲೆ ಅರಿಯಬಹುದಾಗಿದೆ.

'ಮಂಡಲ ಸುತ್ತಿದ ಹಾವಿನಂತೆ ಮಡಲಲ್ಲಿ ಕಟ್ಟಿದ್ದರೇನು?
ಕೊರಳ ಸುತ್ತಿದ ಹಾವಿನಂತೆ ಕೊರಳಲ್ಲಿ ಸುತ್ತಿದ್ದರೇನು?
ಹುಸಿ, ಕಳವು, ಪರದಾರ, ಅನ್ಯಭಜನೆ, ಭವಿ ಬಳಕೆ
ಬಿಡದನ್ನಕ್ಕರ
ಲಿಂಗಭಕ್ತನೆನಿಸಬಾರದು, ಭಕ್ತಲಿಂಗವೆನಲಿಲ್ಲ.
ಆಚಾರ ಸಹಿತ ಭಕ್ತ, ಅನಾಚಾರ ಸಹಿತ ನರರು ಇಂತೆನಲಾಗಿ
ಆಚಾರ ಭ್ರಷ್ಟರಾದ ಅನಾಮಿಕರನ್ನು ನಮ್ಮ ಕೂಡಲ
ಚನ್ನಸಂಗಯ್ಯ ಬಲ್ಲನಾಗಿ ಒಲ್ಲನು'

ಈ ವಚನದಲ್ಲಿ ಕೆಟ್ಟಭವಿಯನ್ನು ಕುರಿತು ವಿಶದವಾಗಿ ವಿವರಿಸಿದೆ. ಇದನ್ನು
ಓದುಗರು ಬಲು ಎಚ್ಚರಿಕೆಯಿಂದ ಓದುವದಾದರೆ ಈ ವಚನಕಾರರ ಅರ್ಥವು
ನಿಚ್ಚಳವಾಗಿ ತಿಳಿಯುತ್ತದೆ. ಇಲ್ಲವಾದರೆ ಒಮ್ಮೊಮ್ಮೆ ಮುಗ್ಗರಿಸುವ

ಸಮಯ ಸಂಧಿಸುತ್ತದೆ. ಈ ಕೆಟ್ಟಭವಿತನದ ವಿವರಣೆಯಿಂದ ದುರಹಂಕಾರಕ್ಕೆ ಎಡೆಯಿಲ್ಲ. ತಾ ನೆಟ್ಟಗಿಲ್ಲದೆ ಹುಟ್ಟುಭವಿಯನ್ನು ಕೆಟ್ಟವನೆಂದು ಹೀಯಾಳಿಸಲು ಹವಣಿಲ್ಲ, ಹುಟ್ಟುಭವಿಯಾಗಿದ್ದರೆ ಲೇಸು. ಕೆಟ್ಟಭವಿಯಾಗಿದ್ದರೆ ತೀರ ಕಷ್ಟ."

ಹುಟ್ಟುಭವಿ, ಕೆಟ್ಟಭವಿ ಎಂಬುದರ ನಿಷ್ಕೃಷ್ಟವಾದ ಅರ್ಥವನ್ನು ಚನ್ನಬಸವಣ್ಣ ವಿವರಿಸಿಲ್ಲ. ಶ್ರೀಗಳವರ ಗ್ರಂಥದಲ್ಲಿಯೂ ಅದರ ಅರ್ಥ ಸ್ಪಷ್ಟವಾಗುವುದಿಲ್ಲ.

ತಮ್ಮ ಧರ್ಮಕ್ಕೆ ಸೇರದವರನ್ನು ಕಾಫಿರ್, ದೈತ್ಯ, ಹೀದನ್, ಪ್ಯಾಗನ್, ಭವಿ ಎಂದು ಕರೆಯುವ ವಾಡಿಕೆ ಎಲ್ಲ ಧರ್ಮಗಳಲ್ಲಿಯೂ ಇದೆ. ಈ ಶಬ್ದಗಳನ್ನು ಇನ್ನಾದರೂ ಧರ್ಮಗಳ ಚರಿತ್ರೆಗಳಿಂದ ತೊಡೆದು ಹಾಕಬೇಕು. ಪ್ರತಿಯೊಬ್ಬರೂ ತಮ್ಮ ಧರ್ಮವೇ ದೊಡ್ಡದೆಂದು ಭಾವಿಸುವ ಮನೋಭಾವ ಸುಸಂಸ್ಕೃತಿಯ ಕುರುಹಲ್ಲ. ಪ್ರತಿಯೊಂದು ಧರ್ಮದಲ್ಲಿಯೂ ಸತ್ಯವಿದೆ. ಆ ಸತ್ಯವನ್ನು ನಾವು ನೋಡುವ ರೀತಿ – ಅವರು ನೋಡುವ ರೀತಿ ಬೇರೆಯಾಗಿರಬಹುದು. ಆದರೆ ಕೆಲವು ಮೂಲಭೂತವಾದ ಋಜುತತ್ತ್ವಗಳನ್ನು ಎಲ್ಲ ಧರ್ಮಗಳೂ ಒಪ್ಪಿಕೊಳ್ಳುತ್ತವೆ. ಒಂದು ಧರ್ಮ ಆ ಮೂಲಭೂತವಾದ ಋಜು ತತ್ತ್ವವನ್ನು ಎಷ್ಟರಮಟ್ಟಿಗೆ ಕಾರ್ಯೋನ್ಮುಖಮಾಡಿದೆಯೆಂಬುದನ್ನು ನಾವು ಲಕ್ಷಿಸಬೇಕು. ಧಾರ್ಮಿಕ ಸಮಭಾವನೆ, ಸೋದರತೆ, ಸೌಹಾರ್ದ ಬೆಳೆಯಲು ಈ ಮಾರ್ಗವುಳಿದು ಬೇರೆ ಮಾರ್ಗವಿಲ್ಲ.

**ಇ) ತಂದೆ ಗುರುವಾಗಲಾರ:** "ತಂದೆ ತಾ ಬಲ್ಲಿದನೆಂದು ತನ್ನ ಮಗನಿಗೆ ದೀಕ್ಷೆಯನ್ನಿತ್ತು ಗುರುವಾಗಲು ಬರುವದಿಲ್ಲ. ಇದು ಇಂದಿನ ವಿಷಮ ವಾತಾವರಣದಲ್ಲಿ ಒಡಮೂಡತೊಡಗಿದೆ. ಇದರಿಂದ ಇಬ್ಬರಿಗೂ ಹೇಳತೀರದ ಕಷ್ಟನಷ್ಟಗಳೊದಗುತ್ತವೆ. ಅಲ್ಲದೆ ಅವರಿಬ್ಬರಲ್ಲಿ ಗುರು ಶಿಷ್ಯ ಸಂಬಂಧವೂ ಸಮನಿಸುವುದಿಲ್ಲ. ಇದನ್ನು ಇಲ್ಲಿ ನೋಡಿ!

'ತನ್ನ ಪುತ್ರಂಗೆ ತಾನೆ ಗುರುವಾದೆನೆಂಬ ಗುರುದ್ರೋಹಿಯ ಮಾತು ಕೇಳಲಾಗದು.

ಎನಗೆ ಎನ್ನ ತಂದೆಯೇ ಗುರುವೆನ್ನುವ ದ್ರೋಹಿಯ ಮುಖವ ನೋಡಲಾಗದು.

ಅವರಿಬ್ಬರೊಳಗೆ ಗುರುಶಿಷ್ಯ ಸಂಬಂಧವನಾಚರಿಸಿದೊಡೆ,
ಅವರಿಬ್ಬರ ತರ್ಕಿಸಿ ಕಟ್ಟ ಹೊತ್ತಿಸಿ ನೊಂದಿಸಿ ಸುಡುವ
ನಮ್ಮ ಕೂಡಲ ಚನ್ನಸಂಗಮದೇವ.'

ಹಾಗೆ ಮಾಡುವಾತ ಗುರುದ್ರೋಹಿ! ಮಾಡಿಸಿಕೊಂಬುವಾತ ಶಿ[ಷ್ಯ]ದ್ರೋಹಿ !!"

ಈ ಮಾತನ್ನು ಇಂದಿನ ವಿಚಾರಯುಗ ಖಂಡಿತವಾಗಿ ಒಪ್ಪಿಕೊಳ್ಳ[ಲು] ಸಾಧ್ಯವಿಲ್ಲ. ತಂದೆ ಜ್ಞಾನಸಂಪದನಾಗಿ, ತತ್ತ್ವವೇತ್ತನಾಗಿ, ಸತ್ಯಪ್ರ[ಿಯ]ನಾಗಿದ್ದರೆ ಮಗ ಅವನನ್ನು ಗುರುವೆಂದು ಒಪ್ಪಿಕೊಳ್ಳುವುದರಲ್ಲಿ ತ[ಪ್ಪೇ]ನು? ಮಹಾಕವಿ ರವೀಂದ್ರನಾಥರಿಗೆ ಅವರ ತಂದೆ ದೇವೇಂದ್ರನ[ಾಥ] ಠಾಕೂರರೇ ಗುರುವಾಗಲಿಲ್ಲವೇ? ಮಹಾಪ್ರಧಾನಿ ಜವಹರಲಾಲ್‌ಜಿ ತ[ಮ್ಮ] ತಂದೆ ಮೋತಿಲಾಲರನ್ನೇ ಗುರುವೆಂದು ಭಾವಿಸುವುದಿಲ್ಲವೇ? ಗುರುತ್ವವನ್ನ[ು] ಗುಣದ ಮಾನದಿಂದ ಅಳೆಯಬೇಕೋ ಹೊರಗಣ ಲಾಂಛನಗಳ ಮಾನದಿ[ಂದ] ಅಳೆಯಬೇಕೋ?

ನೂತನ ವೀರಶೈವ ಸಮಾಜ ನಿರ್ಮಾಣವಾಗುತ್ತಿದ್ದ ಕಾಲದಲ್ಲಿ ಚನ್ನ[-] ಬಸವಣ್ಣ ಅನುಯಾಯಿಗಳ ನಿಷ್ಠೆ, ಮತದ ಒಗ್ಗಟ್ಟು ಸುಭದ್ರವಾಗಿರಲೆಂ[ದು] ಜಂಗಮಾಧಿಕ್ಯವನ್ನು ಸಾರಿದ್ದಾನೆ. ಜಂಗಮ ಎಲ್ಲರಿಗಿಂತ ಹಿರಿಯ, ಶ್ರೇ[ಷ್ಠ] ಎಂದು ಹೇಳುವ ಭರದಲ್ಲಿ ತಂದೆಯನ್ನೂ ಗೌಣವಾಗೆಣಿಸಿದ್ದಾನೆ. ತ[ನ್ನ] ಹುಟ್ಟಿಗೆ ಕಾರಣರಾಗಿ– ಪಾರ್ವತಿ ಪರಮೇಶ್ವರ ಸ್ವರೂಪರಾದ ತಂದೆ ತಾ[ಯಿ]ಗಳನ್ನು ಗೌರವಿಸದವನು ಹೊರಗಿನ ಗುರುವನ್ನೋ ಜಂಗಮನನ್ನೋ ಗೌ[ರವಿ]ಸುತ್ತಾನೆಯೇ ಎಂದು ತಿಳಿದವರು ವಿಚಾರಮಾಡಬೇಕು.

ಈ) ಕುಲಜನಾರು?: "ಕುಲಮದ ಕೆಲವರನ್ನು ಬಾಧಿಸುತ್ತಿ[ದೆ.] ನಾ ಕುಲಜ, ನೀ ಕುಲಜ ಎಂದು ಅಹಮಿಕೆಯಿಂದ ಕೆಲವರು ಬಿರ್‍ರನೆ ಬೀಗು[ತ್ತಿ]ವರು. ನಿಜವಾದ ಕುಲಜರಾರೆಂಬ ವಿಮರ್ಶೆ ಅವರಿಗಿಲ್ಲ. ಕುಲದ ಕತ್ತ[ಲೆ]ಯಲ್ಲಿ ವ್ಯಾಕುಲರಾಗಿ– ವ್ಯಗ್ರರಾಗಿ– ಕಂಗಾಣದವರಾಗಿರುತ್ತಾರೆ. ಕುಲ[ಜ]ರೆಂಬುವವರೆ ಅಕುಲಜರಾಗಿ– ಅನಾಚಾರಿಗಳಾಗಿ ಬಾಳುತ್ತಿದ್ದಾರೆ. ನಿ[ರಾ]ಕುಲರಾಗುವುದೆ ನಿಜವಾದ ಕುಲಜತ್ವವೆಂಬುದನ್ನು ಮರೆತಿದ್ದಾರೆ.

'ಶಿವಭಕ್ತನೆ ಕುಲಜನೆಂಬರು ನೋಡಯ್ಯ.
ಯುಕ್ತಿ ವಿಡಿದು ವಿಚಾರಿಸರು ನೋಡಾ.
ವ್ಯಾಕುಲ, ನಿರಾಕುಳ ಎಂಬುವೆರಡು ಕುಳ(ಲ) ನೋಡಯ್ಯ!
ವ್ಯಾಕುಳವೆ ಭವಿ, ನಿರಾಕುಳವೆ ನಿರ್ಭವಿ,
ವ್ಯಾಕುಳವೆ ಭವಿ, ನಿರಾಕುಳವೆ ಭಕ್ತ.
ಜ್ಞಾನಿಗೆ ಕತ್ತಲೆ ಇಲ್ಲ, ಅಜಾತಂಗೆ ಹೊಲೆಯಿಲ್ಲ, ಆತನೆ
ಕುಲಜ ನೋಡಯ್ಯ.
ಕುಲದೀಪಕನಾರೆಂದೊಡೆ ನಮ್ಮ ಕೂಡಲ ಚನ್ನಸಂಗಮನಲ್ಲಿ
ಅರಿವು, ಆಚಾರ, ಸತ್ಕ್ರಿಯೆ ಸಂಪತ್ಸಮೃದ್ಧಿಯುಳ್ಳ
ಶಿವಸಂಧಾನಿಗಳೆ ಕಾಣಿರೋ.'

ಈ ವಚನವನ್ನು ಓದಿದಲ್ಲಿ ಕುಲದ ಕಚ್ಚಾಟ ಕುಸಿದು ಹೋಗುತ್ತದೆ. ವ್ಯಾಕುಲವ ಕಳೆದು ನಿರಾಕುಳಕ್ಕೆ ನಿಲಯವಾದಾಗ ನಿಜವಾದ ಕುಲವಂತಿಕೆ ಬರುವುದೆಂಬುದು ಮನವರಿಕೆಯಾಗುತ್ತದೆ. ಅರಿವು, ಆಚಾರ, ಸತ್ಕ್ರಿಯೆ, ಸಂಪತ್ಸಮೃದ್ಧಿಗಳನ್ನು ಸಂಪಾದಿಸಿದವನೆ ಕುಲದೀಪಕನೆಂಬುದು ಕಣ್ಣಿಗೆ ಕಟ್ಟಿ ದಂತಾಗುತ್ತದೆ. ಬರೀ ವ್ಯಾಕುಳವನ್ನು ಕಳೆದು ಕುಲಜನಾದರೆ ಪ್ರಯೋಜನ ವಿಲ್ಲ. ಜೊತೆಗೆ ಅರಿವು, ಆಚಾರಾದಿಗಳನ್ನು ಅಳವಡಿಸಿಕೊಂಡು ಕುಲ ದೀಪಕರೂ ಆಗಬೇಕು. ಆಗ ಆತ ಭಕ್ತ; ಮುಕ್ತ."

'ಜ್ಞಾನಿಗೆ ಕತ್ತಲೆ ಇಲ್ಲ, ಅಜಾತಂಗೆ ಹೊಲೆಯಿಲ್ಲ' 'ಅರಿವು, ಆಚಾರ, ಸತ್ಕ್ರಿಯೆ ಸಂಪತ್ಸಮೃದ್ಧಿಯುಳ್ಳ ಶಿವಸಂಧಾನಿಗಳೆ ಕುಲ ದೀಪಕರು' ಎಂಬೆರಡು ದಿವ್ಯವಚನಗಳಲ್ಲಿ ಚನ್ನಬಸವಣ್ಣ ತನ್ನ ಹಿರಿತನ ವನ್ನು ತೋರಿದ್ದಾನೆ. ಈ ವಚನಗಳ ಒಳ ಅರ್ಥವನ್ನು ನೋಡಿದರೆ ಯಾವನ ಮುಖ ಶಿವನತ್ತ (ಅಂದರೆ ಭಗವಂತನತ್ತ) ತಿರುಗಿದೆಯೋ ಅವನು ಕುಲಜ, ಕುಲದೀಪಕ; ಯಾವನ ದೃಷ್ಟಿ ಕೇವಲ ಪ್ರಾಪಂಚಿಕ ವಾಗಿದೆಯೋ ಅವನು ಭವಿ. ಕುಲಜತ್ವ, ಕುಲದೀಪಕತ್ವ ವೀರಶೈವನಿಗೇ ಮೀಸಲೆಂದು ಇವರಿಂದ ಅರ್ಥವಾಗುವುದಿಲ್ಲ. ಯೇಸು, ಸೊಕ್ರಟೀಸ್, ರಾಬಿಯಾ, ಅಲ್ ಹಲ್ಲಾಜ್ ಮನ್‌ಸೂರ್, ಶ್ರೀ ರಾಮಕೃಷ್ಣ, ಗಾಂಧೀಜಿ

ಇವರೆಲ್ಲ ಕುಲಜರಾಗುತ್ತಾರೆ. ವೀರಶೈವರಿಗೂ, ವೀರಶೈವೇತರರಿಗೂ ಪೂ
ರಾಗುತ್ತಾರೆ.

## ಎ) ಶೀಲವಾವುದು ? — ಶೀಲವಂತನಾರು ?

'ಶೀಲ ಶೀಲವೆಂದೊಡೇನು ?
ಭಕ್ತರ ಮಠಕ್ಕೆ ಹೋಗಿ ಒಳಹೊರಗೆಂಬುದು ಶೀಲವೇ ?
ನಮ್ಮ ಲಿಂಗಕ್ಕೆ ಒಳ್ಳೆ ಅಗ್ಗವಣಿ ತನ್ನಿ, ಒಳ್ಳೆಪುಷ್ಪವ ತನ್ನಿ
ಒಳ್ಳೆ ಓಗರವ ಮಾಡಿ ಎಂಬುದು ಶೀಲವೇ ?
ಭವಿ ನೋಡಿದ ಮಡಕೆಯನ್ನು ಕಳೆವುದು ಶೀಲವೇ ?
ಕೆರೆಭಾವಿಯ ಕಳೆವುದು ಶೀಲವೇ ?
ಒಸರುವ ಉದಕವ ತಾಹದು ಶೀಲವೇ ? ಅಲ್ಲಲ್ಲ.
ಅಂಗನೆಯರ ಅಧರಪಾನ ಉದರಕ್ಕೆ ಹೋಗುವನ್ನಕ್ಕರ ಶೀಲ
ಯದೆ!
ಈಷಣತ್ರಯವೆಂಬ ಸೊಣಗಂಗಳು ಬೆಂಬತ್ತಿ ಬರುತ್ತಿರಲು ಶೀಲ
ಯದೋ!
ಇಂತಹರು ಶೀಲವಂತರಾಗಲು, ನದಿಯು ತಟಾಕದಲ್ಲಿ
ಕನ್ನವನಿಕ್ಕಿ ಉದಕವ ತಂದು ಮಜ್ಜನಕ್ಕೆರೆವ ಶೀಲವಂತರು
ಸುಯಿಧಾನಗಳಪ್ಪರೆ ? ಆಗದು.'

ಯಾವುದು ಶೀಲವೆಂಬುದನ್ನು ಚನ್ನಬಸವಣ್ಣ ಸ್ಪಷ್ಟವಾಗಿ ವರ್ಣಿಸು
ತ್ತಾನೆ:

'ಚಿತ್ತ ಚಂಚಲವಳಿದು ಮನವು ಮಹದಲ್ಲಿ ನೆಲೆಗೊಂಬುದೇ ಶೀಲ
ಗುರುಲಿಂಗಮವೇ ಪ್ರಾಣವೆಂಬ ಪರಮ
ಪರಿಣಾಮ ನೆಲೆಗೊಂಬುದೇ ಶೀಲ.
ಭೀಭತ್ಸ ಶಬ್ದ, ದ್ವಿಗುಣ, ತ್ರಿಗುಣ, ಪಂಚಭೂತ, ಅರಿಷಡ್ವರ್ಗ,
ಸಪ್ತವ್ಯಸನ, ಅಷ್ಟಮದ, ನವಗ್ರಹ, ದಶವಾಯು,
ದಶೇಂದ್ರಿಯ ಇಂತಿವೆಲ್ಲವ ಕೊಲ್ಲುವುದೇ ಶೀಲ;
ಕೊಂದು ತಿಂದಾತನೆ ಶೀಲವಂತ.
ಅಶನವರತು, ವ್ಯಸನಬೆಂದು, ಹುಸಿಮುಸಣಿಸಿ, ಮಹಾಲಿಂಗದ
ವಿಷಯದೊಳಗೆ ತಲ್ಲೀಯವಾಗಿ ಸರ್ವಾಂಗವು
ಸಮತೆಯಾಗಿರಬಲ್ಲೊಡೆ ಅವರಚ್ಚ ಶೀಲವಂತರು.'

ಶೀಲವಂತನಾದೊಡೆ ಪ್ರಪಂಚನಾಸ್ತಿಯಾಗಿರಬೇಕು.
ಸೀಮೆಯಾದೊಡೆ ಪಂಚೇಂದ್ರಿಯುಗಳು ನಾಸ್ತಿಯಾಗಬೇಕು.
ತನ್ನ ಕರ್ತುವಿನಲ್ಲಿ ಸಕಲ ಸಂಶಯು ನಾಸ್ತಿಯಾದ ಶೀಲಕ್ಕೆ
ಭವಂನಾಸ್ತಿ, ಭವಿನಾಸ್ತಿ, ಭ್ರಮೆನಾಸ್ತಿ.
ಇವು ನಾಸ್ತಿಯಾದಲ್ಲದೆ ನಮ್ಮ ಕೂಡಲಚನ್ನಸಂಗಯ್ಯನಲ್ಲಿ
ಶೀಲವಂತನೆನಿಸಬಾರದು.
ಈ ವಂಚನೆಯ ಡಂಭಕ ಅಪಸ್ಮಾರಿಗಳಿಗೆಂತಯ್ಯಾ.'

ಶೀಲ ಶಬ್ದಕ್ಕೆ ಚನ್ನಬಸವಣ್ಣ ಕೊಟ್ಟಿರುವ ವ್ಯಾಪಕಾರ್ಥ ಸರ್ವ ಸಮ್ಮತವಾಗಿದೆ. ಅರಿಷಡ್ವರ್ಗಗಳನ್ನು ಗೆದ್ದು, ಈಷಣತ್ರಯಗಳಿಂದ ದೂರ ವಾಗಿ, ಸದಾ ಈಶ್ವರಚಿಂತನೆಯಲ್ಲಿರುವುದೇ ಶೀಲವೆಂದು ಚನ್ನಬಸವಣ್ಣ ಹೇಳಿರುವ ಮಾತನ್ನೇ ಎಲ್ಲ ಧರ್ಮಗಳೂ ಒಪ್ಪಿಕೊಳ್ಳುತ್ತವೆ.

ಐ) ಸಾಹಿತ್ಯ ಸಿದ್ಧಿ : "ಕಾವ್ಯ ನಿರ್ಮಾಣವೇ ತನ್ನ ಜೀವನ ಧ್ಯೇಯವೆಂದು ಚನ್ನಬಸವಣ್ಣ ಭಾವಿಸದಿದ್ದರೂ ಹಿರಿಯ ವಚನಕಾರರಂತೆ ಅವನೂ ಅನುಭವಪೂರ್ಣವಾದ ಸೊಗಸಾದ ಮಾತುಗಳನ್ನಾಡಿದ್ದಾನೆ. ಅವನ ವಚನಗಳಲ್ಲಿ ಸಾಹಿತ್ಯ ಸೌರಭ ತುಂಬಿರುವುದನ್ನು ಶ್ರೀಗಳವರು ಚೆನ್ನಾಗಿ ವರ್ಣಿಸಿದ್ದಾರೆ.

"ತನ್ನ ಅನುಭವವನ್ನು ವಿಭಜಿಸುವ ವಿವರಿಸುವ ಶಕ್ತಿ ಚನ್ನಬಸವಣ್ಣನಿ ಗಿದೆ. ತನ್ನ ಪೂರ್ಣ ದೃಷ್ಟಿಯನ್ನು ಪ್ರಯೋಗಿಸುವುದರಲ್ಲಿ ಪೂರ್ಣ ಪ್ರವೀಣ; ಮಾತು ಮಿತ; ಭಾವ ಸಮುನ್ನತಿ ಅಮಿತ. ಆತನ ವಿವರಣೆಯ ವಿಚಾರ ಶೈಲಿಯಲ್ಲಿ ಕಾವ್ಯ ಸೌಂದರ್ಯವೂ ಶಬ್ದ ಮಾಧುರ್ಯವೂ ಒಡಮೂಡಿವೆ. ಆತನ ಸಮಗ್ರವಚನದಲ್ಲಿ ಇದೇ ಶೈಲಿಯ ಎಡೆಯಾಟವಿಲ್ಲದಿದ್ದರೂ ಅದರಿಂದ ಆತನಿಗೆ, ಆತನ ವೈಶಿಷ್ಟ್ಯತೆಗೆ ಯಾವ ಕೊರತೆಯಿಲ್ಲ. ಒಟ್ಟಿನಲ್ಲಿ ಆತ ನಿಜ ವಾದ ವಿಮರ್ಶಕ. ವಿವರಣೆಯ ಕ್ಷೇತ್ರದಲ್ಲಿ ಇತರರಿಗೆ ದಿಗ್ದರ್ಶಕ!

ಸಿದ್ಧಹಸ್ತದಿಂದ ವಿಷಯಗಳನ್ನು ಹೇಗೆ ವಾಸ್ತವವಾಗಿ ವಿವರಿಸಬಲ್ಲನೋ ಹಾಗೆ ಸೂತ್ರದಂತೆ ಸಾರವಾಗಿ, ಗಾದೆಗಳಂತೆ ಗಂಭೀರವಾಗಿ ಮಾತುಗಳನ್ನೂ ಹೇಳಬಲ್ಲ. ಹೇಳಿದ್ದಾನೆ. ಆ ಮಾತುಗಳನ್ನು ಒಮ್ಮೆ ಓದಿದರೆ ಅದೆಂದಿಗೂ ಮರೆಯುವಂತಿಲ್ಲ. ನಿದರ್ಶನಕ್ಕೆ ಕೆಲವನ್ನಿಲ್ಲಿ ಗುಂಪುಗೂಡಿಸಲಾಗಿದೆ.

## ಷಡಿಯದ ಮಾತುಗಳು

೧. ಅರಿದಾಗಲಿದ್ದಿತ್ತು, ಮರೆದಾಗ ಬಿದ್ದಿತ್ತು.
೨. ಅವಿವುಳ್ಳಾತಂಗೆ ಅಗ್ಗವಣಿಯ ಹಂಗೇಕೋ ?
೩. ಅರೆಭಕ್ತರಾದವರ ನೆರೆಯಲ್ಲಿರಲಾಗದು.
೪. ಅಂಗ ಲಿಂಗ ಸಂಗ ಸಮರಸವಾದದೆ ಭಕ್ತಕಾಯ.
೫. ಅಂಗವೆ ಸೆಜ್ಜೆ, ಆಚಾರವೆ ಶಿವದಾರ, ತ್ರಿಕರಣ ಶುದ್ಧಿ ಕುಳಿಕೆ.
೬. ಆಚಾರವೆ ಅಂಗ, ಅರಿವೇ ಪ್ರಾಣ.
೭. ಆಚಾರ ಸಹಿತ ಭಕ್ತ, ಅನಾಚಾರ ಸಹಿತ ನರ.
೮. ಆನೆಯ ಮಾನದೊಳಗಿಕ್ಕಿದೊಡೆ ಅಡಗುವುದೆ ?
೯. ಇದ್ದುದ ವಂಚನೆಮಾಡದಿಪ್ಪುದೆ ಶೀಲ; ಇಲ್ಲದು ಕಡನ ಮಾಡದಿಪ್ಪುದೆ ಶೀಲ.
೧೦. ಒಕ್ಕುದೆಂಬುದೆ ಕಾಯ, ಮಿಕ್ಕುದೆಂಬುದೇ ಪ್ರಾಣ.
೧೧. ಒಮ್ಮೆಯಲ್ಲದೆ ಇಮ್ಮೆಯುಂಟೆ ಪೂಜೆ ?
೧೨. ಒಮ್ಮೆಯಲ್ಲದೆ ಇಮ್ಮೆಯುಂ ಪೂಜೆ ?
೧೩. ಓಡಲಾಗದ ಮೃಗವು ಶ್ವಾನಂಗೆ ಮಾಂಸವನೀವಂತೆ.
೧೪. ಜಂಗಮ ಪ್ರೇಮಿಗೆ ಜಡಮತಿಯುಂಟೆ ?
೧೫. ದೇವಾ, ನೀವು ನಿಮ್ಮಂತೆ, ಉಳಿದುದೆಲ್ಲವೂ ನೀವಿರಿಸಿದು
೧೬. ನದಿಯುದಕವ ನದಿಗಿತ್ತಂತೆ.
೧೭. ನಾನಿಲ್ಲದ ಮುನ್ನ ನೀನಿರ್ದುದಿಲ್ಲವಯ್ಯ.
೧೮. ನಿಮ್ಮನುಭವಿಯ ನೀವೆಂಬೆನಯ್ಯ.
೧೯. ನಿಷ್ಠೆಯುಳ್ಳಾತಂಗೆ ನಿತ್ಯನೇಮದ ಹಂಗೇಕೋ ?
೨೦. ಪರುಷನ ಪರ್ವತದಲ್ಲಿ ಕಬ್ಬುನವುಂಟೆ ?
೨೧. ಪರಿಮಳವ ಸೋಂಕಿದ ವಾಯುವ ವಿವರಿಸಬಹುದೆ ?
೨೨. ಪಾಕ ಸಂಬಂಧಿಗೆ ಪ್ರಸಾದ ದೂರ.
೨೩. ಭವಿಮಿಶ್ರದ ಭಂಗಗಾರರು ಅತ್ತಲು ಇಲ್ಲ, ಇತ್ತಲು ಇಲ್ಲ

೨೪. ಭವಿಪಾಕ ಪುನರಪಿ ಜನ್ಮ.

೨೫. ಭಕ್ತರೂಪೇ ಗುರುರೂಪು, ಗುರುರೂಪೇ ಭಕ್ತರೂಪು.

೨೬. ಬಯಸಿ ಬಂದುದು ಅಂಗಭೋಗ, ಭಯಸದೆ ಬಂದುದು ಲಿಂಗ ಭೋಗ.

೨೭. ಬಸವಣ್ಣನೆ ಭಕ್ತ, ಪ್ರಭುವೆ ಜಂಗಮ.

೨೮. ಭಕ್ತರಿಗೆ ಅನುಭಾವವೇ ಬೀಜ; ಅನುಭಾವವೆ ಅರುವಿನ ಗೊತ್ತು.

೨೯. ಭಕ್ತಕೆಟ್ಟು ಭವಿಯಾದಲ್ಲದೆ ಲಿಂಗೈಕ್ಯನಲ್ಲ.

೩೦. ಬೇಡುವಾತ ಜಂಗಮನಲ್ಲ; ಬೇಡಿಸಿಕೊಂಬಾತ ಭಕ್ತನಲ್ಲ.

೩೧. ಬೇಕೆಂಬುದು ಕಾಯಗುಣ, ಬೇಡೆಂಬುದು ವೈರಾಗ್ಯ.

೩೨. ಮರ್ಮವಿಡಿದು ಮಾಡುವಂಗೆ ಕರ್ಮವಿಲ್ಲ.

೩೩. ಮಹಾನುಭಾವಿಗಳು ಊಚು, ಉಳಿದವರು ನೀಚು.

೩೪. ಮನಶುದ್ಧವುಳ್ಳಾತಂಗೆ ಮಂತ್ರದ ಹಂಗೇಕೆ?

೩೫. ಮಾಟವಿಲ್ಲದ ಕೂಟವದೇಕೊ? ಕೂಟವಿಲ್ಲದ ಮಾಟವದೇಕೊ?

೩೬. ಮುತ್ತು ನೀರಿನಲ್ಲಿ ಹುಟ್ಟಿ ಮತ್ತೆ ನೀರಪ್ಪುದೆ.

೩೭. ರಾಶಿಗಿಕ್ಕಿದ ಲಚ್ಚಣ ರಾಶಿಯ ಕೊಳಬಲ್ಲುದೆ?

೩೮. ಲಕ್ಷಕ್ಕಾದಡೂ ಒಬ್ಬ ಭಕ್ತನುಂಟು; ಕೋಟಿಗಾದಡೆಯೂ ಒಬ್ಬ ಜಂಗಮನಿಲ್ಲ.

೩೯. ಲಿಂಗ ಮುಟ್ಟಿದವರ ಕೈಮೀಸಲು.

೪೦. ಲಿಂಗವೇ ಕ್ಷೇತ್ರ, ಜಂಗಮವೇ ಬೀಜ.

೪೧. ಲಿಂಗ ನಿಷ್ಠೆಯಿಲ್ಲದವರ ಅಂಗಣವ ಮೆಟ್ಟಲಾಗದು.

೪೨. ವಿಶ್ವತೋಚಕ್ಷುವಿನೊಳಗೆ ಜ್ಞಾನಚಕ್ಷುವೊಂದೆ.

೪೩. ವ್ಯಾಕುಳವೆ ಭವಿ, ನಿರಾಕುಳವೆ ನಿರ್ಭವಿ.

೪೪. ಶರಣು ಶರಣೆನಲರಿಯದೆ ಬರಿದೊರೆಯಾದರು.

೪೫. ಸತ್ಯವಿಲ್ಲದ ಭಕ್ತಿ, ಹತ್ತು ಸಾವಿರ ಕಾಲ ಮಾಡಿದಡೇನು?

೪೭. ಸಂತೆಯೊಳಗೆ ಸಮಾಧಿಯುಂಟೆ ?
೪೭. ಸಾವಿರಕೊಬ್ಬ ಸತ್ಯ, ಲಕ್ಷಕೊಬ್ಬ ಭಕ್ತ, ಕೋಟಿಗೊಬ್ಬ ಶ
೪೮. ಹಮ್ಮುನುಡಿದ ಭಕ್ತನ ಮನೆಯಾರೋಗಣೆ ಕಾರಿದ ಕೂ
೪೯. ಹಗರಣದ ಓಗರ ಹಳಸಿದಂತೆ.
೫೦. ಹೇಳಬಾರದ ಘನವ ಕೇಳಬಾರದು.
೫೧. ಹಾಲ ಸಾಗರದೊಳಿರ್ದು ವಾಳಿಯಾವಿನ ಬೆನ್ನ ಹರಿವುದೆ!
೫೨. ಜ್ಞಾನಿಗೆ ಕತ್ತಲಿಲ್ಲ, ಅಜಾತಂಗೆ ಹೊಲೆಯಿಲ್ಲ.

ಒ) **ಕಡೆನುಡಿಗಳು :** ಧರ್ಮ, ಸಮಾಜ, ಸಾಹಿತ್ಯರಂಗಗ ಅದ್ಭುತ ಕೆಲಸ ಮಾಡಿದ ಮಹಾವ್ಯಕ್ತಿ ಚನ್ನಬಸವಣ್ಣ. ಅವನ ಸೇವೆಯ ವ್ಯಾ ಕತೆಯನ್ನು ವಿಚಾರಮಾಡಿ ಶ್ರೀಗಳವರು ಅವನನ್ನು 'ಸಮ್ಯಜ್ಞಾನಿ' ಎ ಕರೆದಿರುವುದು ಯಥೋಚಿತವಾಗಿದೆ. ಅವನ ಬಹುಮುಖ ಸೇವೆಯ ಶ್ರೀಗಳವರು ಇಂತು ಕ್ರೋಢೀಕರಿಸಿದ್ದಾರೆ.

"ಹನ್ನೆರಡನೆಯ ಶತಮಾನದ ಶಿವಶರಣರಕಾಲ ಅಧ್ಯಾತ್ಮಿಕ ಸ ನೆಯ ಕಾಲವಾಗಿದ್ದಂತೆ ಸಮಾಜಸುಧಾರಣೆಯ ಕಾಲವೂ ಆಗಿದ್ದಿ ಹಲಕೆಲ ಶಿವಶರಣರು ಈ ಕಾಲದಲ್ಲಿ ತಮತಮಗೆ ತಕ್ಕಂತೆ ಶಕ್ಯವಿದ್ದ ತೊಡಗಿದರು. ಇಂಥವರಲ್ಲಿ ಚನ್ನಬಸವಣ್ಣನು ಅಗ್ರಗಣ್ಯನು. ಈ ನಿಷ್ಪಕ್ಷಪಾತ ಬುದ್ಧಿಯಿಂದ ನಿರ್ದಾಕ್ಷಿಣ್ಯವಾಗಿ ನಿರ್ದುಷ್ಟಸಿದ್ಧಿಯಿಂದ ಸಮಾ ಜೀವನವನ್ನು – ಷಟ್‌ಸ್ಥಲ ಸಿದ್ಧಾಂತವನ್ನು ವಿಮರ್ಶಿಸಿದ್ದಾನೆ — ವಿ ಸಿದ್ದಾನೆ. ಕೊರತೆಗಳನ್ನು ತುಂಬಿತಂದು ಕಳೆಗೊಳಿಸಿದ್ದಾನೆ. ಇ ಫಲವಾಗಿ ವೀರಶೈವರಲ್ಲಿ ಶೈವದ ಎಡೆಯಾಟ ಹೊಯ್ದಾಟ ನಿಂತು ಸಮಾಜ ಮಾನ ಬೇರೂರಿತು. ವಿಶಾಲತತ್ವವು ಕಳೆದುಂಬಿ ಕೊನರಿತು – ಕಾಯ್ದಿಟ್ಟ 'ಷಟ್‌ಸ್ಥಲ ಚಕ್ರವರ್ತಿ'ಯಾಗಿದ್ದಂತೆ 'ಸಮಾಜಸುಧಾರಕಾಗ್ರಣಿ'ಯ ಆದನು.

ಚನ್ನಬಸವಣ್ಣ ಮಹಾಜ್ಞಾನಿ; ಮಹಾನುಭಾವಿ. ತೇಜಸ್ವಿ ಓಜಸ್ವಿ. ಸುಧಾರಕ; ವಿಮರ್ಶಕ. ಆತನ ವಚನವಾಣಿಯಲ್ಲಿ ಈ ವ್ಯಕ್ತಿತ್ವ ಹೆಜ್ಜೆಹೆಜ್ಜೆಗೂ ಹೊಳೆಯುತ್ತದೆ. ಮಾತುಮಾತಿಗೂ ಮಿಂಚುತ್ತದೆ. ಚನ್ನ

ಬಸವಣ್ಣನು ಅವಲೋಕಿಸಿದುದನ್ನು ಆಳವಾಗಿ ಆಲೋಚಿಸುತ್ತಾನೆ; ಆಲೋಚಿಸಿದ್ದನ್ನು ಅನುಭವಿಸಿದ್ದನ್ನು ಭಾವಗರ್ಭಿತವಾಗಿ ಬಿಚ್ಚಿ ಆಡುತ್ತಾನೆ. ಆದ್ದರಿಂದ ಅಲ್ಲಿ ಸತ್ವವಿದೆ. ಸತ್ಯವಿದೆ. ಆತನು ತನ್ನ ಹಿಂದಿದ್ದ ತನ್ನೊಡನಿದ್ದ ಸಮಾಜದ ಕೊರತೆಗಳನ್ನು ಕಂಡರೀತಿ, ಮುಂಬರಿವ ಸಮಾಜ ಹೇಗೆ ಹೆಜ್ಜೆಹಾಕಬೇಕೆಂಬುದನ್ನು ಹೇಳುವ ನೀತಿ ಇವು ಆದರ್ಶವಾಗಿವೆ; ಅನನ್ಯಸಾಧಾರಣವಾಗಿವೆ. ಅಲ್ಲದೆ ಆತನ ಜ್ಞಾನಾನುಭವಗಳ ಮೆರಗಿಗೆ ಓರೆಗಲ್ಲಾಗಿವೆ. ಜ್ಞಾನದ ರೂಪನ್ನೂ ಅನುಭವದ ತಿರುಳನ್ನೂ ವಚನರೂಪದಲ್ಲಿ ಚೆನ್ನಾಗಿ ಚಿತ್ರಿಸಿದ್ದಾನೆ. ಸಾಮಾಜಿಕ ಕೊರತೆಗಳನ್ನು ಕಣ್ಣಾರೆಕಂಡು ಕಡುನೊಂದು ಸರಿಪಡಿಸಿದ್ದಾನೆ. ಆತನ ಆ ಜ್ಞಾನಾನುಭವಗಳಿಗೆ ಆಗಮಾಮ್ನಾಯ ವಚನಗಳು ಬೆಂಬಲವಿದ್ದು ಒಂದು ಹೊಸ ಪ್ರತಿಭೆಯನ್ನು ನವನೈಶಿತ್ಯವನ್ನೂ ತಂದುಕೊಟ್ಟಿವೆ.

ಬಸವಣ್ಣ ಹೃದಯವನ್ನು ಕರಗಿಸುತ್ತಾನೆ. ಚನ್ನಬಸವಣ್ಣ ಮೆದುಳನ್ನು ಮೆರಗಿಸುತ್ತಾನೆ. ಬಸವಣ್ಣನದು ಬಾಹ್ಯಚಿನ್ಹವುಳ್ಳ ಸಕಲರನ್ನೂ ಸಂಗನೆಂದು ಭಾವಿಸುವ ಭಕ್ತಿ; ಚನ್ನಬಸವಣ್ಣನದು ಬಾಹ್ಯಾಭ್ಯಂತರಗಳನ್ನು ಆಳವಾಗಿ ಅಳೆದು ಕಾಣುವ ದೃಷ್ಟಿ. ಸಕಲರಲ್ಲಿ ಏಕತ್ವವನ್ನು ಭಾವಿಸುವ ಭಕ್ತಿಗೂ, ಒಂದನ್ನು ಸರ್ವರಲ್ಲಿ ಸಮೀಕ್ಷಿಸುವ ದೃಷ್ಟಿಗೂ ವ್ಯತ್ಯಾಸವಿಲ್ಲದಿದ್ದರೂ ಮಾರ್ಗ ಬೇರೆ. ಈ ಗುಣದಿಂದ ಎಡಹುವಾಗ ಎತ್ತಿಹಿಡಿಯುವ ಶಕ್ತಿ ಚನ್ನಬಸವಣ್ಣನಲ್ಲಿ ಮೈಗೂಡಿಬಂದಿದೆ. ಆದ್ದರಿಂದ ಆತ ಅಳಿಯನಾದರೂ ಬಸವಣ್ಣನಿಗೆ ಆದರ್ಶವ್ಯಕ್ತಿ! ಹೀಗಿದ್ದರೂ ಚನ್ನಬಸವಣ್ಣನು ಆ ಹೆಮ್ಮೆಯನ್ನು ಇಟ್ಟುಕೊಂಡಿಲ್ಲ. ಸೋದರಮಾವನಾದ ಬಸವಣ್ಣನಲ್ಲಿದ್ದ ತನ್ನ ಪೂಜ್ಯಭಾವವನ್ನು ತೊರೆದವನಲ್ಲ. ಭಕ್ತಿಸಾಮ್ರಾಜ್ಯದಲ್ಲಿ ಬಸವಣ್ಣನನ್ನು ಮನಸಾರೆ ಒಪ್ಪಿದ್ದಾನೆ. ಭಕ್ತಿಯನ್ನೂ ವಿರಕ್ತಿಯನ್ನೂ ತನ್ನ ಜ್ಞಾನಾಗ್ನಿಯ ಮೂಕ್ಷೆಯಲ್ಲಿ ಬೆಸೆದಿದ್ದಾನೆ. ಜ್ಞಾನಘನನಾದ ಚನ್ನಬಸವಣ್ಣನು ಜನಿಸದಿದ್ದರೆ, ಭಕ್ತಿಬಲ್ಲಿದನಾದ ಬಸವಣ್ಣನಿಗೂ ವಿರತಿವಿಶಿಷ್ಟನಾದ ಅಲ್ಲಮ ಪ್ರಭುವಿಗೂ ಸಂಧಿಗ್ಧಸಮಯದಲ್ಲಿ ಯಾರುತಾನೆ ಹೊಂದಾವಣಿಕೆ ಮಾಡುತ್ತಿದ್ದರು? ಕೊರತೆಯಿಂದ ಕೂಡಿದ ಸಮಾಜದ ಆಚಾರ – ವಿಚಾರ

ಗಳನ್ನು ಇನ್ನಾರು ಪರಿಪೂರ್ತಿಗೊಳಿಸುತ್ತಿದ್ದರು ? ಸಾಮಾಜಿಕ ಸಂಪ್ರದಾ-
ಗಳನ್ನು ಯಾರು ತೊಡೆದುಹಾಕುತ್ತಿದ್ದರು ?

ಚನ್ನಬಸವಣ್ಣನ ಜ್ಞಾನ ಅಮೇಯ; ಆತನ ವ್ಯಕ್ತಿತ್ವ ಅನು-
ಮೇಯ. ಅವನಿಗೆ ಯಾರೂ ಸಾಟಿಯಿಲ್ಲ. ಚನ್ನಬಸವಣ್ಣನಿಗೆ ಸ-
ಚನ್ನಬಸವಣ್ಣನೆ! ಹೇಮಗಿರಿಗೆ ಹಿಮಕಣವು ಸಾಟಿಯಾದೀತೆ? ಆ
ಆ ಜ್ಞಾನದ ಉಜ್ವಲಸೀಮೆಗೆ ಗೀಟೆನ್ನೆಳೆಯುವುದು ಸಾಧ್ಯವಾದೀತೆ?

ಆದರೂ ಈ ಮಾತನ್ನು ಹೇಳದೆ ಸಮಾಧಾನವಿಲ್ಲ. ಚನ್ನಬಸವಣ್ಣ
ಚಿನ್ಮಯ ಜೀವನ ನಿರೀಕ್ಷಣದಲ್ಲಿ ಈ ಮೂರು ಅಂಶಗಳು ನಮ್ಮ ಗಮನ-
ಸೆಳೆಯುತ್ತವೆ. ೧. ಚನ್ನಬಸವಣ್ಣನು ಆತ್ಮಜ್ಞಾನಿಯಾದನು. :
ಸಾಮಾಜಿಕ ಸಂಪ್ರದಾಯಗಳನ್ನು ಕತ್ತರಿಸಿ, ಕೊರತೆಗಳನ್ನು ತು-
ಸಮಾಜಸುಧಾರಕನಾದನು; ಷಟ್‌ಸ್ಥಲ ಚಕ್ರವರ್ತಿಯಾದನು. ೩. ರ
ಕೀಯ ರಂಗಕ್ಕಿಳಿದು ಚಿಕ್ಕದಣ್ಣಾಯಕನಾದನು.

ಇದು ಆತನ ವ್ಯಕ್ತಿತ್ವ. ಇನ್ನು ಆತನ ವಾಣಿಯಾದ ವಚನವನ್ನು-
ಶಿಸಿ ಎರಡು ಮಾತುಗಳನ್ನು ಹೇಳದೆ ತೃಪ್ತಿ ತೀರದು; ಬರೆಹ ಮುಗಿಯ-

ಆತನ ವಚನ ಆತನು ಸಮಾಜದಲ್ಲಿ ಕೃಷಿಮಾಡಿರುವುದರ ಫ-
ಜ್ಞಾನಾನುಭವಗಳ ರಸಘಟ್ಟ, ಷಟ್‌ಸ್ಥಲ ಸಿದ್ಧಾಂತದ ಸರ್ವಸ್ವ ಆ-
ಪ್ರಾಮಾಣ್ಯಗಳ ಅಂಗೀಕಾರಕ್ಕೆ ಆಗರ. ವಿಮರ್ಶೆ – ವಿವರಣೆಗಳ ಮೂ-
ಸಾಮಾಜಿಕ ಅಧ್ಯಾತ್ಮಿಕ ನೀತಿ ನಿಯಮಗಳ ಪ್ರತಿಪಾದನೆ – ಪಾ-
ನಡೆದಿವೆ ಅದರಲ್ಲಿ!

ಬಸವಣ್ಣನ ವಚನದಲ್ಲಿ ಆತನ ಸಾಧನಜೀವನ ಹೋರಾಟವು ಹ-
ಹೊಮ್ಮುವಂತೆ ಇಲ್ಲಿ ಚನ್ನಬಸವಣ್ಣನ ಜೀವನಾಂಶಗಳು – ಹೋರಾಟ-
ತೋರಿಬರುವುದಿಲ್ಲ. ಕೇವಲ ಆತನ ಬೌದ್ಧಿಕ ಪರಿಶ್ರಮದಿಂದೊ-
ಪರಿಪಕ್ವತೆಯ ಹೊಗರೇರಿದೆ. ಬಸವಣ್ಣನದು ಜನರನ್ನು ಭಕ್ತಿಮಾರ್ಗ-
ಆಕರ್ಷಿಸುವುದರಲ್ಲಿ ಅನುರಕ್ತಿ.

ಪರಮತಗಳ ಜಂಝಾಮಾರುತದ ಆಘಾತದಿಂದ ವಿಶೀರ್ಣವಾದ ವ-
ಧರ್ಮಗಳು ಅಸ್ತವ್ಯಸ್ತಗಳಾಗಿ ಅಪರಿಪೂರ್ಣಗಳಾಗಿ ಸಾಮಾಜಿಕರಲ್ಲಿ ಆ-
ಣೆಗೆ ದಿಕ್ಕುದೆಸೆ ತೋರದೆ ಅಲ್ಲೋಲಕಲ್ಲೋಲವೆದ್ದಾಗ ಚನ್ನಬಸವಣ್ಣ

ವಚನ ತುಂಬಾ ಕೆಲಸಮಾಡಿದೆ. ನೂತನವಾಗಿ ಸೇರಿದ ಸೇರುವ ಸಾಮಾಜಿಕರಿಗೆ ಈತನ ವಚನ ತನ್ನ ಜ್ಞಾನದೀಪವನ್ನು ಬೆಳಗಿಸಿ ಹೊಂಬೆಳಗನ್ನಿತ್ತು ಮುಂದಾರಿ ತೋರಿದೆ. ಮನೋಭಾವಗಳಲ್ಲಿಯೂ ಮತಧರ್ಮಗಳಲ್ಲಿಯೂ ಜೀವನರೀತಿಯಲ್ಲಿಯೂ ನೀತಿಯಲ್ಲಿಯೂ ಸಂಘಟಿತವಾದ ಸತ್ಯವಾದ ಏರ್ಪಾಟನ್ನೆಸಗಿದೆ. ಮುಗ್ಗರಿಸುವಾಗ ಮುಂಗೈಯನ್ನಿತ್ತು ಎತ್ತಿದೆ. ತಾತ್ವಿಕ ವಿವರಣೆ, ನೈತಿಕ ವಿಚಾರಣೆ, ಸಾಮಾಜಿಕ ಸುಧಾರಣೆ, ಷಟ್ ಸ್ಥಲ ಪ್ರತಿಪಾದನೆ ಇವು ಈ ವಚನದ ಹೃದಯನಾಡಿಗಳು.

ಅರಿವು, ಆಚರಣೆ ಚನ್ನಬಸವಣ್ಣನ ವಚನದ ಎರಡು ಕಣ್ಣುಗಳು. ಈ ಎರಡು ಕಣ್ಣೋಟಕ್ಕೆ ಪರವಸ್ತು ಒಂದೇ ದೃಶ್ಯಕಳೆ! ಪರಿಣಾಮ ಒಂದೇ ಪರಿತೃಪ್ತಿ !

ಒಟ್ಟಿನಲ್ಲಿ ಚನ್ನಬಸವಣ್ಣನ ಜ್ಞಾನಾನುಭವಗಳ ಕಿಡಿಗಳು ಆತನ ವಚನರೂಪದಲ್ಲಿ ತೊಳಗುತ್ತವೆ; ಬೆಳಗು ತೋರುತ್ತಿವೆ. ಅವುಗಳ ಪ್ರಯೋಜನವನ್ನು ಪಡೆಯುವುದು ಪಾಠಕರ ಜ್ಞಾನೋಪಾಸಕರ ಕೆಲಸ. ಆತನ ಅಚ್ಚಳಿಯದ ಕೃತಿಯಲ್ಲಿ ಆತನ ಜ್ಞಾನದ ಪ್ರತಿಮೆಯಿದೆ. ಅದನ್ನು ತಿಳಿದೋದುವವರು ತಿಳಿಗಣ್ಣಿನಿಂದ ಚೆನ್ನಾಗಿ ದಿಟ್ಟಿಸಬಹುದು. ಅರಿದಾಚರಿಸಿದಲ್ಲಿ ಸಾಕ್ಷಾತ್ಕರಿಸಿಕೊಳ್ಳಬಹುದು."

---

# ೩. ಬಸವಣ್ಣ

ಬಸವಣ್ಣ ಕನ್ನಡ ಸಾಹಿತ್ಯದ ಸೀಮಾಪುರುಷನಾಗಿದ್ದಾನೆ. ಕ
ಸಾಹಿತ್ಯಕ್ಕೆ ಜಾನಪದಮುಖವನ್ನು ಕಲ್ಪಿಸಿ ಅದನ್ನು ಎಲ್ಲರ ಮ
ಮನಕ್ಕೂ ಒಯ್ದ ಕೀರ್ತಿ ಬಸವಣ್ಣನದು.

ಶೈವಮತದಲ್ಲಿ ವೀರಶೈವ ಸಂಪ್ರದಾಯವು ಬಸವಣ್ಣನ ಹಿಂದೆ
ಆರಂಭವಾಗಿದ್ದರೂ ಅದಕ್ಕೆ ನೂತನ ಚೇತನವನ್ನು ಕೊಟ್ಟವನು ಬಸ
ಕ್ರಿಸ್ತಧರ್ಮಕ್ಕೆ ಸೇಂಟ್‌ಪಾಲ್ ಮಾಡಿದ ಕೆಲಸವನ್ನು ವೀರಶೈವ ಧರ್ಮ
ಪಂಚಾಚಾರ್ಯರೂ, ಮಾರ್ಟಿನ್ ಲ್ಯೂಥರ್ ಮಾಡಿದ ಕೆಲಸವ
ಬಸವಾದಿ ಪ್ರಮಥರೂ ಮಾಡಿದರೆಂದು ನಾವು ಭಾವಿಸಬಹುದು.

ವಿನಯ ಸೌಶೀಲ್ಯ, ಸಹೃದಯತೆ, ನಿರ್ಮಲಮನಸ್ಸು ಮನುಷ್ಯನ
ಯಾವ ಮಹೋನ್ನತಿಗೆ ಮುಟ್ಟಿಸುವುದೆನ್ನುವುದಕ್ಕೆ ಬಸವಣ್ಣನ ಜೀವನ
ಪರಮಸಾಕ್ಷಿಯಾಗಿದೆ.

ಬಸವಣ್ಣನ ಬಗ್ಗೆ ಕನ್ನಡದಲ್ಲಿ ವಿಪುಲವಾದ ಸಾಹಿತ್ಯ ಬೆಳೆ
ಅವನ ಜೀವನದ ಪ್ರಾಮುಖ್ಯ ಘಟನೆಗಳ ಐತಿಹಾಸಿಕತ್ವವನ್ನು ನಿರ್ಣ
ಸುವ ಪ್ರಯತ್ನವನ್ನು ಶ್ರೀಗಳಾದ. ಎಂ. ಆರ್. ಶ್ರೀನಿವಾಸಮೂರ್ತಿಗಳ
ಡಿ. ಎಲ್. ನರಸಿಂಹಾಚಾರ್ಯರೂ, ಡಾ. ಎಸ್. ಶ್ರೀಕಂಠಶಾಸ್ತ್ರಿಗಳ
ಮಾಡಿದ್ದಾರೆ. ಈ ಘನಪಂಡಿತರ ಸಾಧನೆ, ಶೋಧನೆಗಳಲ್ಲಿ ಯ
ನ್ಯೂನತೆಯಿಲ್ಲದಿದ್ದರೂ, ವಿಷಯದಾರಿದ್ರ್ಯದಿಂದ ಅವರ ಪ್ರಯತ್ನ ಅ
ಸಫಲವಾಗಿಲ್ಲ.

ಬಸವಣ್ಣನ ನಿಷ್ಕೃಷ್ಟವಾದ ಐತಿಹಾಸಿಕ ಚಿತ್ರ ನಮಗೆ ಬೇಕೆಬೇ
ಎನ್ನುವ ವಿಷಯದಲ್ಲಿ ಪ್ರಾಯಶಃ ಭಿನ್ನಾಭಿಪ್ರಾಯಗಳು ಬರಲಾ

ಆದರೆ ಅಂಥ ಸಮಗ್ರ ಚಿತ್ರ – ಚರಿತ್ರೆ ದೊರೆಯುವವರೆಗೆ ನಾವು ಕೈಕಟ್ಟಿ ಕೂಡಬೇಕಾದ ಆವಶ್ಯಕತೆಯಿಲ್ಲ.

ಬಸವಣ್ಣನವರ ಹೊರಜೀವನದ ಚರಿತ್ರೆಯ ಆವಶ್ಯಕತೆ ಎಷ್ಟಿದೆಯೋ ಅಷ್ಟೇ ಅವನ ಒಳಜೀವನದ ಚರಿತ್ರೆಯ ಆವಶ್ಯಕತೆಯೂ ಇದೆ. ಒಬ್ಬ ಮಹಾವ್ಯಕ್ತಿಯ ಒಳಜೀವನವನ್ನು ಕಂಡು – ಕಾಣಿಸುವುದಕ್ಕೆ ಹಿರಿಶಕ್ತಿ ಬೇಕು. ಈ ಬಗೆಯ ಗ್ರಂಥಗಳು ಕನ್ನಡದಲ್ಲಿ ಹೆಚ್ಚಾಗಿ ಬಂದಿಲ್ಲ. ಎಮಿಲ್ ಲಡ್ವಿಗನ ಯೇಸು, ಬೀತೋವನ್ ; ಆಂಡ್ರೆ ಮೌರ್ವನ ಶೆಲ್ಲಿ, ಬೈರನ್ ; ಅರ್ವಿಂಗ್ ಸ್ಟೋನಿನ ವಾನ್ ಗೋ, ಜ್ಯಾಕ್ ಲಂಡನ್ ; ರೊಮೆ ರೋಲನ ಶ್ರೀ ರಾಮಕೃಷ್ಣ, ಸ್ವಾಮಿ ವಿವೇಕಾನಂದ ಬಗೆಯ ಗ್ರಂಥಗಳು ಕನ್ನಡದಲ್ಲಿ ಬರಬೇಕು.

ಶ್ರೀ ಸಿಡುಮಾಮಿಡಿ ಶ್ರೀಗಳವರು ಇಂಥ ಚಿತ್ರಚರಿತ್ರೆ ಬರೆಯಲು ಪ್ರಯತ್ನಿಸಿದ್ದಾರೆ. ಅವರ 'ಸೀಳ್ನುಡಿ' – 'ಅಣ್ಣನ ಬದುಕು' ಅಂತರಂಗ ವಿಶ್ಲೇಷಣಾತ್ಮಕ ಜೀವನಚರಿತ್ರೆಗಳ ಸಂಪ್ರದಾಯಕ್ಕೆ ಸೇರಿವೆ.

ಚನ್ನಬಸವಣ್ಣನನ್ನು ನಾವು ದರ್ಶನದೃಷ್ಟಿಯಿಂದ ನೋಡುವುದಾದರೆ ಬಸವಣ್ಣನನ್ನು ಕಾವ್ಯದೃಷ್ಟಿಯಿಂದ ನೋಡಬೇಕು. ಬಸವಣ್ಣನ ವಚನಗಳಲ್ಲಿ ಕಾವ್ಯ ಭಾಗ ಪ್ರಧಾನ; ಉಳಿದವು ಗೌಣ. ಶ್ರೀಗಳವರು 'ಅಣ್ಣನ ಬದುಕು' ಗ್ರಂಥದಲ್ಲಿ 'ಕವಿಯ' ದೃಷ್ಟಿಪಥದಲ್ಲಿ ನಡೆದಿದ್ದಾರೆ.

ಶ್ರೀಗಳವರು ಬಸವಾದಿ ಪ್ರಮಥರ ಮೇಲೆ ಗ್ರಂಥಗಳನ್ನು ಬರೆದು ತಮ್ಮ ಹಿರಿಯ ಸಂಪ್ರದಾಯಕ್ಕನುಗುಣವಾದ ಉದಾತ್ತ ದೃಷ್ಟಿಯನ್ನು ಪಸರಿಸಿದ್ದಾರೆ. ಇಂದು ವೀರಶೈವ ಸಮಾಜ ಗುರು, ವಿರಕ್ತರಕುರುಕ್ಷೇತ್ರವಾಗಿದೆ. ಬಸವಾದಿ ಪ್ರಮಥರ ಹೆಸರೆತ್ತುವುದೇ ಧರ್ಮದ್ರೋಹವೆಂದು ಗುರುವರ್ಗದವರೂ, ರೇಣುಕಾದಿ ಆಚಾರ್ಯರ ಹೆಸರೆತ್ತುವುದು ಮಹಾಪಾಪವೆಂದು ವಿರಕ್ತರು ಭಾವಿಸಲಾರಂಭಿಸಿದ್ದಾರೆ. ಸ್ವಪಕ್ಷ ಸಮರ್ಥಿಸುತ್ತಾ ಪ್ರತಿಪಕ್ಷವನ್ನು ಖಂಡಿಸಿ ಈಯೆರಡುವರ್ಗದವರೂ ನಿರ್ಮಾಣಮಾಡಿರುವ 'ವಾದ

ಸಾಹಿತ್ಯ' ಯಾರಿಗೂ ಗೌರವ ತರುವಂತಿಲ್ಲ. ಕ್ರಿಸ್ತಸಮಾಜದಲ್ಲಿ ರೋಮನ್ ಕಾಥೊಲಿಕ್ಕರೂ ಪ್ರಾಟೆಸ್ಟೆಂಟರೂ, ಇಸ್ಲಾಂ ಸಮಾಜದಲ್ಲಿ ಸುನ್ನಿಗಳೂ ಷಿಯಾಗಳೂ ಯಾವ ರೀತಿಯಲ್ಲಿ ಬಡಿದಾಡಿ ಪರಸ್ಪರ ವಿಧ್ವಂಸನಕ್ಕೆ ಹೋಟರೋ ಅದೇ ವೃತ್ತಿಯನ್ನು ಇಂದು ವೀರಶೈವ ಸಮಾಜವೂ ಕೈಗೊಂಡಿರುವುದು ವಿಷಾದಕರವಾಗಿದೆ. ಇಂಥ ದುರಂತಸಮಯದಲ್ಲಿ ಉಭಯಪಕ್ಷದವರಿಗೂ ವಿವೇಕ ಹೇಳಿ, ಸರ್ವಸಮತಾಭಾವವನ್ನು ಬೋಧಿಸುವ ಹಿರಿಯರ ಆವಶ್ಯಕತೆಯಿತ್ತು. ಶ್ರೀ ನಿಡುಮಾಮಿಡಿ ಶ್ರೀಗಳವರು ಆ ಹೊಣೆ ಹೊತ್ತಿರುವುದು ಆಶಾದಾಯಕವಾಗಿದೆ.

ನಿಡುಮಾಮಿಡಿಯ ಪಂಡಿತಾರಾಧ್ಯರ ಪರಂಪರೆ ಗುರುಪರಂಪರೆಯಾದರೂ ವಿರಕ್ತವರ್ಗದವರನ್ನು ಆದರಿಸುತ್ತ ಗೌರವಿಸುತ್ತ ಬಂದಿರುವುದು ಇತಿಹಾಸಪ್ರಸಿದ್ಧವಾಗಿದೆ. ಹನ್ನೆರಡನೆಯ ಶತಮಾನದ ತರುವಾಯ ಈ ಪೀಠಕ್ಕೆ ಬಂದ ಆಚಾರ್ಯರು ಬಸವ, ಚನ್ನಬಸವರ ಹೆಸರನ್ನು ಇಟ್ಟುಕೊಂಡು ಬಂದಿದ್ದಾರೆ. ಪರಂಪರೆಯ ಹಿರಿಮೆಯನ್ನು ಮುಂದುವರಿಸಿಕೊಂಡು ಬಂದು ವೀರಶೈವ ಸಮಾಜದ ಉಭಯ ಪಕ್ಷಗಳಲ್ಲಿ ಸ್ನೇಹ, ವಿಶ್ವಾಸ, ಸೌಹಾರ್ದ ಮೂಡಲು ಶ್ರೀ ಚನ್ನಬಸವರಾಜ ದೇಶಿಕೇಂದ್ರರು ಮಾಡುತ್ತಿರುವ ಪ್ರಯತ್ನ ನಾಡಿನ ಪ್ರಗತಿಯ ದೃಷ್ಟಿಯಿಂದ ಪರಮಾದರಣೀಯವಾಗಿದೆ.

ಶ್ರೀಗಳವರ 'ಅಣ್ಣನ ಬದುಕು' ಗ್ರಂಥಕ್ಕೆ ಮುನ್ನುಡಿ ಬರೆಯುತ್ತ ವೀರಶೈವ ಸಾಹಿತ್ಯಾಚಾರ್ಯರಾದ ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳವರು 'ಗುರುಪೀಠವನ್ನು ಅಲಂಕರಿಸಿ ಸಹಸ್ರಾರು ಶಿಷ್ಯರಿಗೆ ಉಪದೇಶ ಮಾಡುವ ಅಧಿಕಾರಸ್ಥಾನದಲ್ಲಿರತಕ್ಕವರು ಭಿನ್ನಮತದವನಾದ ನನ್ನಿಂದ ಮುನ್ನುಡಿಯನ್ನು ಕೋರಿರುವುದು ಅವರ ಹೃದಯ ವೈಶಾಲ್ಯವನ್ನು ತೋರಿಸುತ್ತದೆ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಹಾಗೆಯೇ ಗುರುಪೀಠದವರು ಬಸವಣ್ಣನವರ ವಿಚಾರವಾಗಿ ಒಂದು ಮಹತ್ವದ ಗ್ರಂಥವನ್ನು ಬರೆದಿರುವುದು ಕೂಡ ಅವರ ವಿಶಾಲಭಾವನೆಗೆ ಪ್ರತ್ಯಕ್ಷ ನಿದರ್ಶನವಾಗಿದೆ' ಎಂದು ಹೇಳಿರುವುದು ಅಕ್ಷರಶಃ ಸತ್ಯ.

'ಅಣ್ಣನ ಬದುಕು' ಗ್ರಂಥವನ್ನು ಶ್ರೀ ಶ್ರೀನಿವಾಸಮೂರ್ತಿಗಳವರು ಈ ರೀತಿ ಪರಿಚಯಮಾಡಿಕೊಟ್ಟಿದ್ದಾರೆ.

"'ಅಣ್ಣನ ಬದುಕು' ಹೊಸಮಾದರಿಯ ಗ್ರಂಥ; ಅಲ್ಲಿ ಕಾಣಬರುವ ದೃಷ್ಟಿ ಹೊಸದು. ಕಡೆಗೆ ಬಸವಣ್ಣನವರ ತಂದೆ ತಾಯಿಗಳಾರು? ಅವರ ಜನ್ಮಸ್ಥಳ ಯಾವುದು? ಎಂಬ ವಿಷಯಗಳನ್ನು ಕೂಡ ಪ್ರಸ್ತಾಪಿಸದೆ ನೇರ ವಾಗಿ ಬಸವಣ್ಣನವರ ವಚನಗಳನ್ನು ಉದಾಹರಿಸುತ್ತ ಅವರ ಬಾಲ್ಯದ ಬದುಕಿ ನಿಂದ ಹಿಡಿದು ಜವ್ವನದ ಬದುಕು ಮತ್ತು ಚರಮ ಜೀವನದ ಬದುಕು ಗಳನ್ನು ಶ್ರೀಗಳವರು ನಮ್ಮ ಮುಂದಿಟ್ಟಿದ್ದಾರೆ. ಇಲ್ಲಿ ಬಸವಣ್ಣ ಹುಡುಗ ನಾಗಿ ಆಟವಾಡುತ್ತಾನೆ, ಪಾಠ ಕಲಿಯುತ್ತಾನೆ; ತರುಣಿಯಾಗಿ ಸುಳಿಯು ತ್ತಾನೆ, ನೋಂಪಿಯನ್ನು ಹಿಡಿಯುತ್ತಾನೆ; ಯೌವನಸ್ಥನಾಗಿ ಶಸ್ತ್ರಾಭ್ಯಾಸ ಮಾಡುತ್ತಾನೆ; ಬೇಟೆಯನ್ನಾಡುತ್ತಾನೆ; ಪ್ರೌಢನಾಗಿ ಮಂತ್ರಿಯಾಗು ತ್ತಾನೆ, ಸೇನಾಧಿಪತಿಯಾಗುತ್ತಾನೆ; ನೆರೆದ ಚೆಲುವೆಯಾಗಿ ವಿರಹಿಣಿ ಯಾಗುತ್ತಾನೆ, ಕೂಡಲ ಸಂಗಮದೇವನಲ್ಲಿ ಲೀನನಾಗುತ್ತಾನೆ; ಲೌಕಿಕದ ಹಲವು ಕಾಯಕಗಳಲ್ಲಿ ಪರಿಣತನಾಗಿ ಕಾಯಕದಿಂದ ಆಧ್ಯಾತ್ಮಸಾಧನೆ ಮಾಡುತ್ತಾನೆ. ಬಸವಣ್ಣನವರು ತಮ್ಮ ವಚನಗಳಲ್ಲಿ ಹೇಳಿರುವ ಹಲವು ಉಪಮಾನಗಳನ್ನೂ ದೃಷ್ಟಾಂತಗಳನ್ನೂ ಚಮತ್ಕಾರವಾಗಿ ಉಪಯೋಗಿಸಿ ಕೊಂಡು ಬಸವಣ್ಣನವರ ಅನುಭವ ಸರ್ವತೋಮುಖವಾದುದು ಎಂಬುದನ್ನು ಗ್ರಂಥಕರ್ತರು ತೋರಿಸಿಕೊಟ್ಟಿದ್ದಾರೆ; ಅವರ ಬೋಧೆ ಹೃದಯಂಗಮ ವಾದುದು, ಐಹಿಕ ಮತ್ತು ಆಮುಷ್ಮಿಕಗಳೆರಡಕ್ಕೂ ಬೆಳಕು ನೀಡುವಂಥಾದ್ದು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಬಸವಣ್ಣನವರ ವಚನಾಮೃತವನ್ನು ಬಯಸುವವರಿಗೆ ಇಲ್ಲಿ ಹಬ್ಬದೌತಣವಾಗುತ್ತದೆ.

ಈಚಿನ ಗ್ರಂಥಕಾರರು—ಅದರಲ್ಲಿ ನಾನೂ ಒಬ್ಬನಾಗಿದ್ದೇನೆ—ವಚನ ಗಳನ್ನು ಯಥೋಚಿತವಾಗಿ ಆರಿಸಿಕೊಂಡು ಜೋಡಿಸಿಕೊಂಡು ವ್ಯಾಖ್ಯಾನ ಮಾಡುತ್ತ, ಸಂಬಂಧಗಳನ್ನು ಕಲ್ಪಿಸುತ್ತ, ಒಂದು ಸಮಗ್ರ ಚಿತ್ರವನ್ನು ಕೊಡಲು ಪ್ರಯತ್ನಪಟ್ಟಿರುವುದು ಪ್ರಬಲವಾದ ದೋಷವೇನೂ ಇಲ್ಲ. ಹಿಂದಿನವರಿಗೆ ಕಥೆ ಮುಖ್ಯವಾಗಿದ್ದರೆ ಈಗಿನವರಿಗೆ ಬಸವಣ್ಣನವರ ಚಿತ್ತವೃತ್ತಿ,

ಮನಸ್ಸಿನ ಹೋರಾಟ, ಸಂಪ್ರದಾಯ ಶರಣರೊಡನೆ ಬಡಿದಾಟ, ಹಿಡಿ ಗುರಿ, ಸಾಧಿಸಿದ ಕಾರ್ಯ—ಇವುಗಳೆಲ್ಲ ಮುಖ್ಯವಾಗಿ ಕಂಡುಬಂದು ವಚನಗಳನ್ನೇ ಉಪಯೋಗಿಸಿಕೊಂಡಿರುತ್ತಾರೆ. ಹೀಗೆ ಉಪಯೋಗಿ ಕೊಂಡಿರುವುದು ಎಷ್ಟರಮಟ್ಟಿಗೆ ಸಾರ್ಥಕವಾಗಿದೆ ? ಅದರಲ್ಲಿ ಎಷ್ಟರಮಟ್ಟಿ ಅವರು ಜಯಶೀಲರಾಗಿದ್ದಾರೆ—ಎನ್ನುವ ಚಿಕಿತ್ಸಕ ದೃಷ್ಟಿಯಿಂದ ಈ ಗ್ರಂಥಗಳನ್ನು ನಾವು ನೋಡಬೇಕಾಗಿದೆ.

ಶ್ರೀಗಳವರು ಬಸವಣ್ಣನ ವಿಚಾರದಲ್ಲಿ ಒಂದು ಅಮೂಲ್ಯವಾ ಗ್ರಂಥವನ್ನು ರಚಿಸಿದ್ದಾರೆಂದು ನಿಸ್ಸಂದೇಹವಾಗಿ ಹೇಳಬಹುದು. ಬಸವಣ್ಣ ನವರನ್ನು ನಂದೀಶ್ವರಾವತಾರವೆಂದು ಗೌರವಿಸಿ ಸಾಧನೆಯಿಂದ ಅವರ ಆತ್ಮ ಪರಿಪಕ್ವವಾಗಬೇಕಾದ ಆವಶ್ಯಕತೆಯಿರಲಿಲ್ಲವೆಂದೂ ಅವರು ಹೇಳಿರು ಆತ್ಮನಿವೇದಾತ್ಮಕವಾದ ವಚನಗಳು ಲೋಕಾನುಗ್ರಹಾರ್ಥವಾಗಿ ಹೊರ ಅವರಲ್ಲಿ ಯಾವ ಬಗೆಯ ಲೋಪದೋಷಗಳೂ ಇರಲಿಲ್ಲವೆಂದೂ ಕೆಲವು ಸಂಪ್ರದಾಯಸ್ಥರು ಹೇಳುವುದುಂಟು. ಸಾಮಾನ್ಯವಾಗಿ ಮಠಾಧೀಶ್ವರರಾ ಪ್ರವಚನ ಮಾಡುವವರೂ ಗ್ರಂಥರಚನೆ ಮಾಡುವವರೂ ಈ ಸಂಪ್ರದಾಯ ದಿಂದ ಬಿಡುಗಡೆ ಹೊಂದುವುದು ಕಷ್ಟ. ಆದರೆ ಶ್ರೀಗಳವರು ಬಿಡುಗಡೆ ಹೊಂದಿ ಬಸವಣ್ಣನವರ ಸಾಧನೆಯನ್ನೂ ಸಿದ್ಧಿಯನ್ನೂ ಚಿತ್ರಿಸಿದ್ದಾರೆ. ಮನೋವಿಶ್ಲೇಷಣ ದೃಷ್ಟಿಯಿಂದ ಬಸವಣ್ಣನವರನ್ನೂ ಅವರ ಕಾರ್ಯ ಕಲಾಪಗಳನ್ನೂ ನೋಡಬೇಕಾದ ಮತ್ತು ಚಿತ್ರಿಸಬೇಕಾದ ಆವಶ್ಯಕತೆ ಈಗಿನ ಕಾಲದಲ್ಲಿ–ಭರತಖಂಡಕ್ಕೆ ಸಾತಂತ್ರ್ಯ ಲಭಿಸಿ ನಾವು ಸ್ವತಂತ್ರ ಜನಾಂಗವಾಗಿ ರೂಪುಗೊಳ್ಳುತ್ತಿರುವ ಈ ಕಾಲದಲ್ಲಿ–ಹೆಚ್ಚಾಗಿದೆ. ವರ್ಣ ವ್ಯವಸ್ಥೆಯನ್ನೂ ಮೇಲು ಕೀಳುಗಳೆಂಬ ವ್ಯತ್ಯಾಸವನ್ನೂ ಪ್ರತಿಪಾದಿಸುವವರು ಸ್ವಕಪೋಲಕಲ್ಪಿತ ವ್ಯಾಕ್ಯಗಳನ್ನೇನೂ ಆಧಾರವಾಗಿ ಹೇಳುವುದಿಲ್ಲ. 'ದಯಾಮೂಲಂ ಧರ್ಮಂ' ಎನ್ನುವುದನ್ನು ಬಸವಣ್ಣನವರಿಗೆ ಹಿಂದೆಯೇ ವೇದಮತೀಯರು ಹೇಳಿರುತ್ತಾರೆ. ಯಜ್ಞಯಾಗಾದಿ ಹಿಂಸಾಕರ್ಮಗಳು ಮಾನ್ಯತೆಯನ್ನು ಎಂದೋ ಕಳೆದುಕೊಂಡವು: ಆತ್ಮಯಜ್ಞವನ್ನೇ ವಿವರಿಸಿ ಬೃಹದಾರಣ್ಯಕೋಪನಿಷತ್ತು ಮೊದಲಾದುವು ಹೇಳಿವೆ. ನೀತಿಯ ನೆಲೆ

ಗಟ್ಟಿನಮೇಲೆ ಸಮಾಜ ವ್ಯವಸ್ಥೆಯಾಗಬೇಕೆಂಬುದನ್ನು ನಮ್ಮ ಪ್ರಾಚೀನರೂ
ಹೇಳಿದ್ದಾರೆ. ಉದಾತ್ತವಾದ ನೀತಿಯನ್ನೂ ಧರ್ಮವನ್ನೂ ಸನಾತನವೆಂದೂ
ಕರಣೀಯವೆಂದೂ ರಾಮಾಯಣಾದಿಗಳಲ್ಲಿ ಸಾರಿದ್ದಾರೆ. ಕರ್ಮ ಭಕ್ತಿ
ಜ್ಞಾನಗಳ ಸಾಮರಸ್ಯದಿಂದ ಆತ್ಮೋದ್ಧಾರವೆಂದೂ ಜನತೋದ್ಧಾರವೆಂದೂ
ಮಹಾ ವಿಭೂತಿಗಳು ಪ್ರತ್ಯಕ್ಷ ನಿದರ್ಶಿಸಿದ್ದಾರೆ. ಆದರೆ ಉದಾತ್ತ ತತ್ವ
ಗಳೆಲ್ಲ ಗ್ರಂಥಗಳಲ್ಲಿವೆ; ಅವುಗಳ ಅನುಷ್ಠಾನ ಕೆಲವರು ಮಹಾವಿಭೂತಿಗಳಲ್ಲಿ
ಮಾತ್ರ ಕಂಡುಬರುತ್ತದೆ. ಭೂಲೋಕದ ಈ ಮಾನವ ಸಮಾಜ ಎಂದಿ
ನಂತೆಯೇ ಡೊಂಕು ಕೊಂಕುಗಳಿಂದ ತುಂಬಿದೆ. ಅಂತ್ಯಜರೆಂದು ಗಣ್ಯ
ರಾದವರನ್ನೆಲ್ಲ ವೀರಶೈವ ಸಮಾಜ ತನ್ನಲ್ಲಿ ಸೇರಿಸಿಕೊಂಡು ಹರಿಜನ
ಸಮಸ್ಯೆಯೇ ಇಲ್ಲವಂತೆ ಸುಧಾರಣೆ ನಡೆಯಲಿಲ್ಲ. ವರ್ಣವ್ಯತ್ಯಾಸಗಳಿಲ್ಲ
ವೆಂದರೂ ಭೇದಭಾವಗಳು ಅಳಿಸಿಹೋಗದೆ ನಾಮಾಂತರಗಳಿಂದ ಮೆರೆಯು
ತ್ತಿವೆ. ಆದ್ದರಿಂದ ಬಸವಣ್ಣನಂಥವರು ಆಗಾಗ್ಗೆ ಜನ್ಮವೆತ್ತಿ ಸ್ವಮತೀಯ
ರಿಗೂ ಪರಮತೀಯರಿಗೂ ಮಾರ್ಗದರ್ಶನ ಮಾಡಬೇಕಾದ ಆವಶ್ಯಕತೆ
ಇದ್ದೇ ಇದೆ.

ಶ್ರೀಗಳವರು ವಚನಗಳ ವ್ಯಾಖ್ಯಾನ ಮಾಡಿರುವ ಶೈಲಿ ಅಡಕವಾಗಿ
ಮನೋಹರವಾಗಿ ಅರ್ಥಗರ್ಭಿತವಾಗಿದೆ. ಇಲ್ಲಿ ಒಂದೆರಡು ಉದಾಹರಣೆ
ಗಳನ್ನು ಕೊಟ್ಟಿದೆ: 'ಲಿಂಗಕಲೆ ಅಂಗದಲ್ಲಿ ವೇಧಿಸುವುದು ಸತ್ತಮೇಲಲ್ಲ.
ಜೀವಿಸಿರುವಾಗಲೇ ವೇಧಿಸಬೇಕು; ಜೀವನ್ಮುಕ್ತರಾಗಬೇಕು. ಇದನ್ನು
ಪ್ರತಿಪಾದಿಸುವುದೇ ಅಣ್ಣನ ತತ್ವಮಯವಾದ ಕಬ್ಬಿನ ತೋಟ. ಇದೆಲ್ಲವೂ
ಆತನ ಆ ತೋಟದ ಅನುಭವದ ನೋಟ.' 'ಬಸವಿದೇವಿಯ ತನು ಮಡಕೆ
ಯಾದರೂ ಹೊರಬಳಕೆಯಿಲ್ಲದ್ದು. ಜೀವ ಸುಯಿಧಾನ ಹಳಸದ್ದು. ಸಮತೆ
ಜಲ ಸಿಹಿಯಾದದ್ದು–ಅಜಡವಾದದ್ದು. ಕರಣೆ ಕಟ್ಟಿಗೆಗಳು ಭವದವಾಗ್ನಿಯ
ಸೋಂಕಿಲ್ಲದವು. ಸಟ್ಟುಗ ಕಿಲುಬಾಗದ್ದು. ಪರಿಣಾಮದೋಗರ ಮರಳಿ
ಹಸಿವಾಗಿಸದ್ದು. ಇನ್ನೇನಾಗಬೇಕು ?"

ಶ್ರೀಗಳವರು 'ಸೀಳ್ನುಡಿ'ಯಲ್ಲಿ ಮಾಡಿದ ಪ್ರಯೋಗವನ್ನು 'ಅಣ್ಣನ
ಬದುಕಿ'ನಲ್ಲಿ ಮುಂದುವರಿಸಿದ್ದಾರೆ. ಸೀಳ್ನುಡಿ ಬಸವಣ್ಣನ ಒಂಭತ್ತು ವಚನ

ಗಳಲ್ಲಿ ದೊರೆಯುವ ಒಂಭತ್ತು ಸಾಂಕೇತಿಕ ಪದಗಳನ್ನು †ಆಧಾರವಾಗ್ಗಿ ಕೊಂಡು, ಅದೇ ವಿಷಯದಲ್ಲಿ ದೊರೆಯುವ ಇತರ ವಚನಗಳನ್ನು ಕೂಡಿ ಕೊಂಡು ಬರೆಯಲ್ಪಟ್ಟಿರುವ ಗ್ರಂಥ. 'ಅಣ್ಣನ ಬದುಕು' ಬಸವಣ್ಣನ ವಚ ಗಳ ಆಧಾರದಿಂದಲೇ ಆತನ ಜೀವನ ಚರಿತ್ರೆಯನ್ನು ರಚಿಸಲು ಉದ್ದೇ ಪಟ್ಟಿರುವ ಗ್ರಂಥ. ಶ್ರೀಗಳವರು ಬಸವಣ್ಣನ ಜೀವನವನ್ನು ಮೂರು ಮುಖ್ಯ ಘಟ್ಟಗಳನ್ನಾಗಿ ವಿಭಾವಿಸಿದ್ದಾರೆ.

'ಬಾಲ್ಯದ ಬದುಕಿ'ನಲ್ಲಿ ಬಸವಣ್ಣನ ಆಟ, ಪಾಠ, ಅಭ್ಯಾಸ. ಆದ ಬಸವಣ್ಣನ ಆಟ ಇತರ ಮಕ್ಕಳ ಆಟದಂತಲ್ಲ. ಆತನು ಒಮ್ಮೊಮ್ಮೆ ಹೆಣ್ಣು ಮಗುವಾಗಿ ಹೆಣ್ಣುಮಕ್ಕಳೊಡನೆ ಆಡುತ್ತಾನೆ. ಬಿಳಿಯ ಕರಿಕೆಯ ಕಣ ಲೆಲೆಯ ತೊರೆಯ ತಡಿಲ ಮಳಲ ತಂದು ಬಸವಣ್ಣ ಆಡುವ ಗೌರಿ ನೋಂಪಿಯಾಟದಲ್ಲಿ 'ಶರಣ ಸತಿ, ಲಿಂಗಪತಿ' ಭಾವ ಹುದುಗಿದೆ. 'ಅಣ್ಣನ

---

† ೧. ಚಿನ್ನದನಾಯಿ: 'ಕಾಂಚನವೆಂಬ ನಾಯ ನೆಚ್ಚಿ, ನಿಮ್ಮ ನ ಮರೆದನಯ್ಯ.'

೨. ಮಾಯಾಮಂಜರ: 'ಹಂಜರ ಬಲ್ಲಿತ್ತೆಂದು ಅಂಜದೆ ಓದುವ ಗಿಳಿಯ ………ನಿನ್ನ ಮನದಲ್ಲಿ 'ಮಾಯಮಂಜರ'ವ ಕೊಲುವರೆ.'

೩. ಕಬ್ಬುನದ ಕೋಡಗ: 'ಕಬ್ಬುನದ ಕೋಡಗವ ಪರುಷಮುಟ್ಟಲು ಹೊನ್ನಾದರೇನು ಮತ್ತೇನಾದರೇನು?

೪. ಕಲ್ಲನಾಗರ: 'ಕಲ್ಲನಾಗರ ಕಂಡರೆ ಹಾಲನೆರೆಯೆಂಬರು.'

೫. ಹರಕೆಯ ಕುರಿ: 'ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತು'

೬. ಕಾಡಬಸವ: 'ಕಾಡಬಸವನ ಹುಲಿ ಕಂಡೊಯ್ವರೆ ಅರಯ್ಯ ಲಾಗದೇ.'

೭. ಬೆಣ್ಣೆಯ ಬೆನಕ: 'ಬೆಣ್ಣೆಯ ಬೆನಕಂಗೆ ಕೆಂಡದುಂಡಲಿಗೆಯ ಮಾಡಿ, ಚಲ್ಲವಾಡಿದರೆ ಹಲ್ಲು ಹೋಹುದು.'

೮. ಹಾಲತೊರೆ: 'ಹಾಲತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು.'

೯. ಕುಂಬಳಕಾಯಿ: 'ಕುಂಬಳದ ಕಾಯಿಗೆ ಕಬ್ಬುನದ ಕಟ್ಟು ಕೊಟ್ಟರೆ ಕೊಳೆವುದಲ್ಲದೆ ಬಲುಹಾಗ ಬಲ್ಲುದೆ?'

ಶರಣ ಸತಿ ತತ್ವದಂತೆ ಹೆಕ್ಕಳದ ಹೆಣ್ಣು. ಲಿಂಗಪತಿಯೊಡನೆ ಇನ್ನೂ ವಿವಾಹವಿಲ್ಲದ ಕಮನೀಯ ಕನ್ನೆ. ಅದ್ದರಿಂದ ತನ್ನ ಅಂತರಂಗಿಕ ಪರಾಶಕ್ತಿಯನ್ನು ತನ್ನ ಭಕ್ತಿ ತೊರೆಯಲ್ಲಿನ ಸದ್ಗುಣಸಮೂಹಗಳೆಂಬ ಮಳಲಿನಿಂದ ಗೌರೀಮೂರ್ತಿ ಮಾಡಿದ್ದಾಳೆ. ಸಾತ್ವಿಕ ಭಾವವೆಂಬ ಬಿಳಿಗರಿಕೆಯನ್ನು ಶಮೆ–ದಮೆಗಳೆಂಬ ಕಣಿಗಿಲೆಲೆಗಳನ್ನು ಧರಿಸಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಮುಂತಾದ ಉಳಿದ ಚಿಕ್ಕಮಕ್ಕಳೊಳಗಾಡಿ ಮನಸಾರೆ ಪೂಜಿಸಿ, ಲಿಂಗಾಂಗ ಸಾಮರಸ್ಯರೂಪ ಅನುಪಮ ದಾನಶೀಲನಾದ ಕೂಡಲಸಂಗಮದೇವನು ತನಗೆ ಗಂಡನಾಗಬೇಕೆಂದು ಬೇಡಿಕೊಂಡಿದ್ದಾಳೆ. ಆ ಅಮರ ಸೌಂದರ್ಯದ ನೋಟವೆ ಅವಳ ಅಮೃತದೂಟ; ಅದನ್ನು ಸಂಪಾದಿಸುವುದೇ ಅವಳ ಬಾಲ್ಯದ ಅಲೌಕಿಕದಾಟ.' *

'ಜವ್ವನದ ಬದುಕಿ'ನಲ್ಲಿ ಬಸವಣ್ಣ ಮನೆಮಾಡಿಕೊಂಡು, ಕೃಷಿಕನಾಗಿ ನಾನಾ ಬಗೆಯ ಪ್ರಾಣಿಗಳನ್ನು ಸಾಕಿಕೊಂಡು, ತರು ಲತೆಗಳಲ್ಲಿ ತನ್ನ ತೋಟದಲ್ಲಿ ಆಸಕ್ತನಾಗಿದ್ದುದು ವರ್ಣಿತವಾಗಿದೆ.

"ಬಸವಣ್ಣನ ಜೀವನ ನೀರಸಜೀವನವಲ್ಲ. ಅವನು ಶುಷ್ಕವಿರಕ್ತನಾಗಿರಲಿಲ್ಲ. ಭಗವಂತನ ಅನುಸಂಧಾನಕ್ಕೆ ಸತ್ಯ, ಶಕ್ತಿಗಳು ಹೇಗೆ ಆವಶ್ಯಕವೋ ಹಾಗೆಯೇ ಸೌಂದರ್ಯೋಪಾಸನೆಯೂ ಆವಶ್ಯಕವೆಂದು ಅವನು ಗ್ರಹಿಸಿದ್ದ.

"ಬಸವಣ್ಣ ಸೌಂದರ್ಯೋಪಾಸಕ. ಆತನು ಸೃಷ್ಟಿಯ ಪ್ರತಿಯೊಂದು ಪದಾರ್ಥದಲ್ಲಿ – ಪ್ರಾಣಿಯಲ್ಲಿ – ಕಲೆಯಲ್ಲಿ ಸೌಂದರ್ಯವನ್ನು ಆಶಿಸುತ್ತಾನೆ. ಸೌಂದರ್ಯವಿಲ್ಲದ್ದು ಯಾವುದೇ ಆಗಲಿ ಅದು ಕವಡಿಗಿಂತಲು ಕಡೆ. ಹೀಗಿರುವಾಗ ಸಂಪ್ರಾಪ್ತವಾದ ಸೌಂದರ್ಯದಲ್ಲಿ ಒಂದಂಗವಾಗಲಿ ಒಂದಂಶವಾಗಲಿ ಹೋದರಂತು ಅದು ಯಾವ ಪ್ರಯೋಜನಕ್ಕೆ ಬಾರದು. ಅದರ ಅಸ್ತಿತ್ವವೇ ಸೊಗಸದು. ನಿದರ್ಶನಕ್ಕಾಗಿ,

---

* ಅಣ್ಣನ ಬದುಕು : ಪುಟ ೫.

"ಸಿಂಗದ ನಡು ಮುರಿಯಲಾ ಸಿಂಗವೇನು ಬಾತೆ?
ಸುಂಡಿಲ ಮುರಿದರೆ ಜಗವೇನು ಬಾತೆ?
ಸಂಗ್ರಾಮದಲ್ಲಿ ವೀರನುಳಿಯಲದೇನು ಬಾತೆ?
ಶೃಂಗಾರದ ಮೂಗು ಹೋದರೆ ಶೃಗಾರವೇನು ಬಾತೆ?
ನಿಜ ತುಂಬಿದ ಭಕ್ತಿ ತುಳುಕಾಡದವರ ಸಂಗವೇನು ಬಾತೆ?"

ಎಂದು ಕೇಳುತ್ತಾನೆ. ಸಿಂಗಕ್ಕೆ, ಗಜಕ್ಕೆ, ಸಂಗ್ರಾಮಕ್ಕೆ, ಶೃಂಗಾರಕ್ಕೆ ಸಂಗಕ್ಕೆ ಯಾವಾವುದು – ಯಾರಾರು ಸಿಂಗಾರವೆಂಬುದನ್ನು ವ್ಯಕ್ತ ಪಡಿಸಿದ್ದಾನೆ.

ಅಣ್ಣನು ಪ್ರಾಣಿವರ್ಗಗಳಂತೆ ಪ್ರಾಕೃತಿಕ ಸಿಂಗಾರಕ್ಕೂ ಮ[illegible] ಮೆಚ್ಚುತ್ತಿದ್ದನು. ಪ್ರಾಕೃತಿಕ ಸೌಂದರ್ಯವನ್ನೊಮ್ಮೆ ಕಣ್ತುಂಬ ಕಂ[illegible] ಮನಸೂರೆಗೊಂಡು,

"ನೀರಿಂಗೆ ನೈದಿಲೆಯೇ ಶೃಂಗಾರ.
ಊರಿಂಗೆ ಆಗರವೇ ಶೃಂಗಾರ.
ಸಮುದ್ರಕ್ಕೆ ತೆರೆಯೇ ಶೃಂಗಾರ.
ನಾರಿಗೆ ಗುಣವೇ ಶೃಂಗಾರ.
ಗಗನಕ್ಕೆ ಚಂದ್ರಮನೇ ಶೃಂಗಾರ.
ನಮ್ಮ ಕೂ. ಸಂಗನ ಶರಣರ
ನೊಸಲಿಗೆ ವಿಭೂತಿಯೇ ಶೃಂಗಾರ."

ಹೀಗೆಂದು ಹಾಡುತ್ತಿದ್ದನು. ಹರುಷಗೊಳ್ಳುತ್ತಿದ್ದನು.

ಬಸವಣ್ಣ ಬಾಹ್ಯಸೌಂದರ್ಯಕ್ಕೆ ಮಾತ್ರವೆ ಮೆಚ್ಚುತ್ತಿರಲಿಲ್ಲ ಜೊತೆಗೆ ಆಂತರ ಸಿಂಗಾರಕ್ಕೂ ಪ್ರಾಶಸ್ತ್ಯವನ್ನು ಕೊಡುತ್ತಿದ್ದ, ಕೊಟ್ಟಿದ್ದ ಆದಕ್ಕಾಗಿ 'ನಾರಿಗೆ ಗುಣವೇ ಶೃಂಗಾರ.' ಎಂದು ಬಿತ್ತರಿಸಿದ. ಅಣ್ಣನಿಗೆ ಬೇಕಾದ್ದೂ ಅದೆ. ಹೆಣ್ಣಿಗೆ ಬಾಹ್ಯಸೌಂದರ್ಯವಾಗಲಿ, ಬರೀ ಮೃದು ಮಾತ್ರ ಗಳಾಗಲಿ ಇದ್ದರೆ ಸಾಲದು. ಗುಣವಂತಳಾಗಬೇಕು. ಮಾತಿನಂತೆ ಮನ ಸ್ಸುಳ್ಳವಳಾಗಬೇಕು. ಇವಿಲ್ಲದ ಹೆಣ್ಣನ್ನು ನಂಬಲಾಗದು. ಅಂಥವರನ್ನು ಕಂಡರೆ ಅಣ್ಣನು ಸೈರಿಸಲಾರನು.

"ಅವಳ ವಚನ ಬೆಲ್ಲದಂತೆ
ಹೃದಯದಲ್ಲಿಪ್ಪುದೆಲ್ಲ ನಂಜು ಕಂಡಯ್ಯ !
ಕಂಗಳಲೊಬ್ಬನ ಕರೆವಳು. ಮನದಲೊಬ್ಬನ ನೆನೆವಳು.
ಕೂ. ಸಂ. ದೇವ ಕೇಳಯ್ಯ ಮಾನಿಸಗಳ್ಳಿಯ ನಂಬದಿರಯ್ಯ."

ಎಂದು ಎಲ್ಲರಿಗೂ ಪತಿಯಾದ ಪರಮಾತ್ಮನಲ್ಲಿ ಅಂಥವಳ ವಿಷಯದಲ್ಲಿ ದೂರನ್ನು ಹೇಳುತ್ತಿದ್ದನು. ಅಂಥವಳಿಗೆ 'ಮಾನಿಸಗಳ್ಳಿ'ಯೆಂದು ಸಮರ್ಪಕವಾದ ಬಿರುದನ್ನು ಕೊಟ್ಟಿದ್ದಾನೆ. ಇದಲ್ಲದೆ ಕೆಲವು ಮಂದಿ ಹಣವಂತರು ಆ ಗುಣವುಳ್ಳ ತಮ್ಮ ಹೆಂಡಿರ ಬಾಹ್ಯ ಚಲುವಿಗೆ ಸೋತು, ಮಾತಿನ ಸೆಳವಿಗೆ ಸಿಕ್ಕು ತಾವು ಕಷ್ಟಬಿದ್ದು ಗಳಿಸಿದ ಹಣವನ್ನು ತಾವೂ ಉಣ್ಣದೆ ಸತ್ಪಾತ್ರಕ್ಕೂ ಸಲ್ಲಿಸದೆ ತಮ್ಮ ಮಡದಿಯರಿಗಿರಲೆಂದಿಟ್ಟು ಕೆಟ್ಟು ಹೋಗುತ್ತಿದ್ದರೆ ಅಂಥವರನ್ನು ಕುರಿತು ಅಣ್ಣನು, 'ನಿನ್ನ ಮಡದಿಗಿರಲೆಂದರೆ, ನಿನ್ನ ಮಡದಿಯ ಕೃತಕ ಬೇರೆ. ನಿನ್ನ ಒಡಲು ಕೆಡೆಯಲು, ಮತ್ತೊಬ್ಬನಲ್ಲಿಗೆ ಅಡಕದೆ ಮಾಬಳೆ ? ಹೆರರಿಗಿಕ್ಕಿ ಹೆಗ್ಗುರಿಯಾಗಿ ಕೆಡಬೇಡ. ಕೂ. ಸಂಗನ ಶರಣರಿಗೆ ಒಡನೆ ಸವಿಸುವುದು.' ಎಂದು ಆತ್ಮ ಕಳಕಳಿಯಿಂದ ಹಿತಬೋಧೆ ಹೇಳುತ್ತಿದ್ದನು.

ಅಣ್ಣನು ಸ್ವತಃ ಸೌಂದರ್ಯೋಪಾಸನೆಯನ್ನು ಮಾಡುತ್ತಿದ್ದನು. ಆತನ ಸತ್ಯ ಸೌಂದರ್ಯ ನಿಜದಿಂದ ತುಂಬಿ ತುಳುಕುವ ಭಕ್ತಿವಂತರ ಸಂಗ. ಅದರ ಉಪಾಸನೆಯಲ್ಲಿಯೆ ಆತನು ಉತ್ಕಂಠಿತನಾಗಿದ್ದನು. ಅದಕ್ಕಿಂತ ಹೆಚ್ಚಿನ ಉಪಾಸನೆ ಅಣ್ಣನಿಗೆ ಇನ್ನಾವುದೂ ಇರಲಿಲ್ಲ. ಅದಕ್ಕಾಗಿ ಅಣ್ಣನು ತನ್ನ ಮನಸ್ಸಿಗೆ,

"ಕೋಟಾನುಕೋಟಿ ಜಪವ ಮಾಡಿ
ಕೋಟಲೆಗೊಳಲದೇಕೆ ಮನವೆ ?
ಕಿಂಚಿತ್ತು ಗೀತ. ಒಂದನಂತ ಕೋಟಿ ಜಪ.
ಜಪವೆಂಬುದೇಕೆ ಮನವೆ ? ಕೂ. ಸಂಗನ ಶರಣರ ಕಂಡು
ಆಡಿ ಹಾಡಿ ಬದುಕು ಮನವೇ."

ಇಂತೆಂದು ಉಪದೇಶ ಮಾಡುತ್ತಾನೆ. ಏಕೆಂದರೆ ಅಣ್ಣನು ಅದರಲ್ಲಿರುವ ಸತ್ಯವಾದ ಸೊಬಗನ್ನು ಕಂಡರಿದಿದ್ದನು. ಅದರಿಂದ ಅವನ ಸೊಬಗು

ನಾನಾ ಮುಖದಿಂದ ತುಂಬಿಬರುತ್ತಿದ್ದಿತು; ಆತನ ಕೊರತೆಗಳೆಲ್ಲ ಕ್ಷೀಣ ಗಾಣುತ್ತಿದ್ದವು. 'ಸತ್ಯವಂತನ ಸನ್ನಿಧಿಯಿಂದ ಹಿಂದಣ ದುಸ್ಸಂಗ ಕೆಡುವವು.' 'ಶರಣರ ಸನ್ನಿಧಿಯಿಂದ ಕರ್ಮ ನಿರ್ಮೂಳವಹುದು.' 'ಶರಣರ ಸಂಗವು ಮತ್ತೆ ಭವಮಾಲೆಯ ಹೊದ್ದಲೀಯದು.' 'ಶರಣರ ಬಳಿವಿಡಿದು ಎನ್ನ ದಂದುಗ ಹಿಂಗುವುದು.' 'ತನ್ನ ತಾನರಿಯಬಹುದು.' ಇಷ್ಟೆಲ್ಲ ಉಂಟಾಗುವದರಿಂದಲೆ 'ಸದ್ಭಕ್ತರ ಸಂಗವನೇ ಕರುಣಿಸು ಕೂ. ಸಂ. ದೇವ ನಿಮ್ಮ ಧರ್ಮ.'—ಎಂದು ಪರಮಾತ್ಮನನ್ನು ಪ್ರಾರ್ಥಿಸುತ್ತಿದ್ದನು. ಅದ ರಿಂದ ಅವನ ಆತ್ಮಸೌಂದರ್ಯ ತುಂಬಿಬರುತ್ತಿತ್ತು. ಅದೇ 'ಅಂತರಂಗ ಶುದ್ಧವಿಲ್ಲದವರ ಸಂಗ ಸಿಂಗಿ ಕಾಳಕೂಟ ವಿಷವು.' ಅದರಿಂದ ಆತ್ಮ ಸೌಂದರ್ಯ ನಾಶವಾಗದೆ ಉಳಿಯದು. ಆದಕಾರಣ ದುರ್ಜನರ ಸಂಗದಿಂದ ದೂರವಿರಬೇಕು.

"ತೊತ್ತಿನ ಕೊರಳಲ್ಲಿ ಹೊಂಬಿತ್ತಾಳಿಯ ಸಿಂಗಾರವ ಮಾಡಿದಂತೆ
ಕುಚಿತ್ತರ ಸಂಗ ಸುಸಂಗಿಗೆ ಸಂಗಡವಲ್ಲ.
ಗುರುಗಂಜಿ ಮಾಣಿಕಕ್ಕೆ ಸರಿಯುಪ್ಪುದೆ ಕೂ. ಸಂ. ದೇವ ?"

ಈ ನಿದರ್ಶನಗಳಿಂದ ಅಣ್ಣನು ಅಚಲವಾದ ನಿಶ್ಚಿತಕ್ಕೆ ಬಂದು ನಿಲ್ಲುವನು. ಆದರಿಂದ ಆತನಿಗೆ ಕುಚಿತ್ತರ ಸಂಗ ಎಷ್ಟು ಮಾತ್ರಕ್ಕೂ ಸಲ್ಲದು. ಯಾವ ಕಾಲಕ್ಕೂ ಸೊಗಸದು. ಅದು ಕಾರಣ ಅಣ್ಣನು ಸತ್ಸಂಗ ಸೌಂದರ್ಯೋ ಪಾಸಕ. ಆ ಉಪಾಸನೆಯನ್ನು ಉಲ್ಲಂಘಿಸಿ ಆತನು ಅರಕ್ಷಣ ಇರನು. ಅದೇ ಅವನ ಉಸಿರು; ಅದೇ ಅವನ ಆಧಾರ. ಅದೇ ಅವನ ಬದುಕು. ಅದಕ್ಕಾಗಿ ಅವನು,

"ಜಲವ ತಪ್ಪಿದ ಮತ್ಸ್ಯ ಬದುಕುವುದೇ ಸೋಜಿಗ.
ಗಣತಿಂಥಿಣಿಯೊಳಗಿರಿಸೆನ್ನ ತಂದೆ.
ಶಿವಶಿವ ಕೂ. ಸಂ. ದೇವ ಸೆರಗೊಡ್ಡಿ ಬೇಡುವೆನು—
ಅಯ್ಯಾ ನಿಮ್ಮ ಮಹಾವ್ರತಿಗಳನಗಲಿ ಬದುಕಲಾರೆನು.
ಶಿವಧೋ ಶಿವಧೋ. ಕಂಗಳಶ್ರುಗಳಲ್ಲಿ ಮುಂದುಗಾಣೆನು.
ಲಿಂಗ ಸಂಗಿಗಳನಗಲಿ ಆನೆಂತು ಬದುಕುವೆನು ?"

ಎಂದು ಮುಂತಾಗಿ ಕರಳು ಕರಗುವಂತೆ ತನ್ನ ಆರಾಧ್ಯಮೂರ್ತಿ ಸಂಗನು

ಜೀವನಲ್ಲಿ ಅಂಗಲಾಚುತ್ತಿದ್ದನು. ಆತನ ಅನುಗ್ರಹದಿಂದ ಅಣ್ಣನು ಸದಾ ಸತ್ಸಂಗ ಸೌಂದರ್ಯೋಪಾಸನೆಯಲ್ಲಿಯೇ ಕಾಲ ಕಳೆಯುತ್ತಿದ್ದನು. ಅದರ ಫಲವಾಗಿ ಆ ಸೌಂದರ್ಯದ ಬದುಕು ಅವನಲ್ಲಿ ಬಳಸುವಷ್ಟು ಇದ್ದಿತು."*

ಬಸವಣ್ಣನ ಆಧ್ಯಾತ್ಮಿಕ ವ್ಯವಹಾರ, ವ್ಯಾಪಾರಗಳನ್ನು ವಿವರಿಸಿ ಅವನು ಮಂತ್ರಿತ್ವ ಮಾಡಿದುದರ ವಿಷಯ ಶ್ರೀಗಳವರು ಪ್ರಸ್ತಾಪಿಸಿದ್ದಾರೆ. ಬಸವಣ್ಣನ ಜನ್ಮನದ ಬದುಕಿನ ತಿರುಳೆಂದರೆ ಅವನು ಲಿಂಗಾಂಗ ಸಾಮರಸ್ಯ ವನ್ನು ರೂಢಿಸಿಕೊಂಡ ಬಗೆ. ಬಸವಣ್ಣನ ಜೀವನದಲ್ಲಿ 'ಲಿಂಗಾಂಗ ಸಾಮ ರಸ್ಯ'ಕ್ಕಿರುವ ಪ್ರಾಧಾನ್ಯ ಮತ್ತೆ ಯಾವದಕ್ಕೂ ಇಲ್ಲವೆನ್ನುವುದು ಶ್ರೀಗಳವರು ಚೆನ್ನಾಗಿ ಮನಗಂಡು ವರ್ಣಿಸಿದ್ದಾರೆ.

"ಬಸವಣ್ಣನು ಬಾಲ್ಯದಲ್ಲಿ ಹೆಣ್ಣು ಹುಡಿಗಿಯಾಗಿ ಕೇಡಿಲ್ಲದ ಕೂಡಲ ಸಂಗನು ತನಗೆ ಗಂಡನಾಗಬೇಕೆಂದು ಗೌರೀನೋಂಪಿಯನಾಚರಿಸಿದುದನ್ನು ಓದಿದ್ದೇವೆ. ಈಗ ಬಸವಿದೇವ ಷೋಡಶ ಪ್ರಾಯದ ಯುವತಿ! ಅವಳಲ್ಲಿ ತುಂಬಿ ಬಂದಿದೆ ಭಕ್ತಿರತಿ! ಅಂದು ಅವಳಿಗೆ ಬರೀ ಬಯಕೆ. ಇಂದು ಬೆರಸುವ ಹರಕೆ, ಹಂಬಲ. ಅಭಿಸಾರಿಕೆಯಂತೆ ಆವಳ ಸ್ಥಿತಿಯಾಗಿದೆ. ಅದಕ್ಕಾಗಿ ಅವಳು ಆತನಲ್ಲಿ ಹೀಗೆ ಹೇಳಿಕೊಳ್ಳುತ್ತಾಳೆ:

"ಅರಿಸಿನವನೆ ಮಿಂದು, ಹೊಂದೊಡಿಗೆಯನೆ ತೊಟ್ಟು
ಪುರುಷನ ಒಲವಿಲ್ಲದೆ ಲಲನೆಯಂತೆ ಅಗಿದ್ದೆನಯ್ಯ.
ವಿಭೂತಿಯನೆ ಹೂಸಿ, ರುದ್ರಾಕ್ಷಿಯ ತೊಟ್ಟು
ಶಿವ, ನಿಮ್ಮ ಒಲವಿಲ್ಲದಂತೆ ಆಗಿದ್ದೆನಯ್ಯ!
ಕೆಟ್ಟು ಬಾಳುವರಿಲ್ಲ ನಮ್ಮವರ ಕುಲದಲ್ಲಿ.
ನೀನೊಲಿದು ಸಲಹಯ್ಯ ಕೂ. ಸಂ. ದೇವ."

ಪರಮಾತ್ಮ ಪತಿಯನ್ನು ಬಯಸುವ ಬಸವಿದೇವಿಗೆ, ಅವಳ ಸಿಂಗಾರಕ್ಕೆ ವಿಭೂತಿಯೆ ಅರಿಸಿನ; ರುದ್ರಾಕ್ಷಿಗಳೆ ಹೊಂದೊಡಿಗೆಯಾಗಿವೆ. ಅವು ಗಳಿಂದ ಅಲಂಕೃತಳಾಗಿ ಭಕ್ತಿರತಿಯು ಬಲಿದು ಅಭಿಸಾರಿಕೆಯಂತೆ ಬೇಗ ಕೈವಿಡಿಯಲು ಕೂಡಲ ಸಂಗಯ್ಯನನ್ನು ಕೇಳುತ್ತಿದ್ದಾಳೆ. ತಡಮಾಡುವ

---

ಅಣ್ಣನ ಬದುಕು: ಪುಟ ೬೧

ದಾದರೆ ಕೆಡುವ ಪ್ರಸಕ್ತಿಯುಂಟು. ಕೆಟ್ಟಮೇಲೆ ಕುಲದಲ್ಲಿ ನಮ್ಮನ್ನು ಬಾಳಲೀಸರು. ಅಂದರೆ ಅನ್ಯದೇವರ ಹರಸಿಬೆರಸಿದರೆ ಅವರು ಶರಣಪಕ್ಷಕ್ಕೆ ಸಲ್ಲರು. ಆದುದರಿಂದ ಹೇ ದೇವ, ನೀನೆನಗೆ ಬೇಗ ಒಲಿದು ಸಲಹು ಎಂದು ಬೇಡುವದಲ್ಲದೆ ಮತ್ತೆ ಹೀಗೆ ಬಿನ್ನವಿಸಿಕೊಳ್ಳುತ್ತಾಳೆ :

"ಸಂಸಾರವೆಂಬ ಶ್ವಾನನಟ್ಟ ಮೀಸಲ ಬೀಸರವ ಮಾಡದಿರಯ್ಯ!
ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯ.
ನೀವಲ್ಲದೆ ಮತ್ತೇನನು ಅರಿಯೆನಯ್ಯ.
ಕನ್ನೆಯಲ್ಲಿ ಕೈವಿಡಿದೆನು ನಿಮ್ಮಲ್ಲಿ ನೆರೆದೆನು.
ಮನ್ನಿಸು ಕಂಡ್ಯಾ ಮಹಲಿಂಗವೆ!
ಸತಿಯಾನು, ಪತಿ ನೀನಯ್ಯ.
ಮನೆಯೊಡೆಯ ಮನೆಯ ಕಾಯ್ದಿಪ್ಪಂತೆ,
ನೀವೆನ್ನ ಮನವನು ಕಾಯ್ದಿಪ್ಪ ಗಂಡನು.
ನಿನಗೋತ ಮನವನನ್ಯಕ್ಕೆ ಹರಿಸಿದರೆ,
ನಿಮ್ಮಭಿಮಾನಕ್ಕೆ ಹಾನಿ ಕೂ. ಸಂ. ದೇವ."

ಹೇ ದೇವ, ನೀವೆನ್ನನು ಪರೀಕ್ಷಿಸಲು ಸಂಸಾರ ಶ್ವಾನನ ಅಟ್ಟಿದ ಮಾತ್ರಕ್ಕೆ ಆದಕ್ಕಂಜಿ ಬೇರೊಬ್ಬರ ಮೊರೆಹೊಕ್ಕು ಮೀಸಲ ಕೆಡಿಸಿದವಳೆಂದು ಏನಾದರೂ ಶಂಕಿಸುತ್ತಿರುವಿರಾ? ಹಾಗೆಂದಿಗೂ ನೆನೆಯದಿರಿ. ಹಾಗಿಲ್ಲ ದಿದ್ದರೆ ಹೊತ್ತುಗಳೆವುದೇಕೆ? ಎನ್ನ ಚಿತ್ತ ನಿಮ್ಮದು. ಅದರಲ್ಲಿ ಇನ್ನೊಬ್ಬರಿಗೆ ಅವಕಾಶವಿಲ್ಲ. ಅದನ್ನು ನಿಮಗೆ ಕನ್ನೆಯಂದಿನ ಬಾಳುವೆ ಯಲ್ಲಿಯೆ ಅರ್ಪಿಸಿರುವೆನು. ನೀವೇ ನನಗಾಗಬೇಕೆಂದು ಅಂದು ನೋಂಪಿ ಯನ್ನೂ ಆಚರಿಸಲಿಲ್ಲವೆ? ಅಂದೆ ನಿಮಗೆ ನಾನು ಸತಿಯಾಗಿದ್ದೇನೆ. ನೀವು ನನಗೆ ಪತಿಯಾಗಿದ್ದೀರಿ. ಒಮ್ಮೆ ನಿಮಗೆ ಸೋತ ಮನವನು ಅನ್ಯತ್ರ ಆದೆಂದಿಗೂ ಹರಿಯಬಿಡೆನು; ಬಿಟ್ಟಿಲ್ಲ. ನನ್ನ ಮನವ ಕಾಯ್ದಿದ್ದ ನಿಮಗೆ ಇದು ತಿಳಿಯದೆ? ಇನ್ನೂ ನಿಮಗೆ ಸಂಶಯವೆ? ಇಲ್ಲವಾದಲ್ಲಿ ಮನ್ನಿಸು ದೇವ! ಇಲ್ಲಿಯವರೆಗೆ ಕೆಡದಂತೆ ಕಾಪಾಡಿಕೊಂಡು ಬಂದ ಮೀಸಲು ಮುಂದೆ ಒಂದು ವೇಳೆ ಕೆಟ್ಟರೆ ಆ ಹೊಣೆಗಾರಿಕೆ ನಿನ್ನದು— ಎಂದು ಕರುಳು ಕರಗುವಂತೆ ಪ್ರಾರ್ಥಿಸಿ ಕರುಣ ಹುಟ್ಟಿಸಿ ಕೂಡಲಸಂಗನ

ಕೊಡುವಳು. ಕಡೆಯಿಲ್ಲದ ಸಂತೋಷ ಪಡುವಳು. ಆ ಸಂತೋಷವು ಇವಳನ್ನು ಸುಮ್ಮನಿರಿಸಲಿಲ್ಲ. ಆ ಚಣವೆ ಅವಳು ತನ್ನ ಸಂಗಾತಿಯ ಬಳಿಗೆ ಬಂದು,

"ಜಗವೆಲ್ಲ ಅರಿಯಲು ಎನಗೊಬ್ಬ ಗಂಡನುಂಟು.
ಆನು ಮುತ್ತೈದೆ. ಆನು ನಿಷ್ಠೈದೆ.
ಕೂ. ಸಂಗಯ್ಯನಂತಪ್ಪ ಎನಗೊಬ್ಬ ಗಂಡನುಂಟು."

ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾಳೆ. ಅದಕ್ಕೆ ಆ ಗೆಳತಿಯು, ಅವನಾವ ಚಲುವ–ಅವನಾವ ಸುಖಿ ಎಂದು ಆತನ ಕೈಹಿಡಿದೆ? ಆತನ ಮುಖ ನೋಡಿದರೆ ಮುಕ್ಕಣ್ಣ, ಮನೆ ನೋಡಿದರೆ ಸ್ಮಶಾನ. ಉಡಲು ಒಳಿತಾದ ಉಡಿಗೆಯಿಲ್ಲ, ಉಣಲು ಉತ್ತಮವಾದ ಊಟವಿಲ್ಲ. ಉಪಚಾರಕ್ಕೆ ಪರಿಚಾರಕರು ಭೂತಗಳು. ಒಳ್ಳೆಯ ವಾಹನವಾದರು ಇದೆಯೆನ್ನೋಣವೆ ಅದೂ ಇಲ್ಲ. ಏನು ಕಂಡು ಕೈಹಿಡಿದೆ? ಯಾವ ಸುಖ ಪಡಬಲ್ಲೆ? ಬೇಕೆಂದಿದ್ದರೆ ರೂಪವಂತನಾದ ವಿಷ್ಣುವಿದ್ದ. ರಸಿಕನಾದ ಬ್ರಹ್ಮನಿದ್ದ. ರಾಜನಾದ ಇಂದ್ರನಿದ್ದ ಅವರನ್ನೆಲ್ಲ ಬಿಟ್ಟು ಆ ಕುರೂಪಿಯಲ್ಲಿ ಏತಕ್ಕೆ ಮನಸ್ಸು ಮಾಡಿದೆ?—ಎಂದು ಜರಿದಾಡುವಳು. ಅದಕ್ಕೆ ಬಸವಿ ದೇವಿಯು,

"ಮನಕ್ಕೆ ಮನೋಹರವಲ್ಲದ ಗಂಡರು
ಮನಕ್ಕೆ ಬಾರರು ಕೇಳವ್ವ ಕೆಳದಿ.
ಪನ್ನಗ ಭೂಷಣನಲ್ಲದ ಗಂಡರು,
ಇನ್ನೆನಗಾಗದ ನೊರೆ ನೋಡವ್ವ!
ಕನ್ನೆಯಂದಿನ ಕೂಟ, ಚಿಕ್ಕಂದಿನ ಬಾಳುವೆ—
ಕೂಡಲ ಸಂಗಯ್ಯನದು."

ಇದನ್ನು ಬಿಡಲುಂಟೆ? ಇನ್ನು ಇಮ್ಮನವುಂಟೆ? ಅದೆಂದಿಗೂ ಸಾಧ್ಯವಾಗದ ಮಾತು. ಮನಕ್ಕೆ ಬಾರದವರು ರೂಪವಂತರಿರಲಿ, ರಸಿಕರಿರಲಿ, ರಾಜರಾಗಿರಲಿ ಅವರನ್ನು ಕಡೆಗಣ್ಣಿನಿಂದಲೂ ಕಾಣೆನು—ಎಂದು ತನ್ನ ಮನೋನಿರ್ಧರತೆಯನ್ನು ನೆರೆ ತೋರಿ ನುಡಿಯುತ್ತಾಳೆ, ನಿರವಿಸಿ ನಿಲ್ಲುತ್ತಾಳೆ.

ಅದಲ್ಲದೆ ಒಮ್ಮೆ ಒಲಿದ ಗಂಡನು ಅವನು ಹೇಗಿದ್ದರೂ ಅ
ಕೈಬಿಡುವುದು ಸತಿಧರ್ಮವಲ್ಲ. ಅಷ್ಟೇ ಅಲ್ಲ, ಆತನ ನೇಹಕ್ಕೂ ಹ
ಗಾಗಬಾರದು. ಹಾಗಿದ್ದರೇನೆ ಅದು ಸತೀತ್ವ. ಅವಳು ಪತಿವ್ರತೆ.
ವಾದರೆ,

"ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ,
ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ—
ಇದ್ದರೇನೋ ಶಿವಶಿವಾ? ಹೋದರೇನೋ ಶಿವಶಿವಾ?
ಕೂ. ಸಂ. ದೇವಯ್ಯ ಊಡದ ಆವಿಂಗೆ
ಉಣ್ಣದ ಕರುವ ಬಿಟ್ಟಂತೆ."—ನ್ನ

ಅಂಥವಳು ಬದುಕಿದ್ದು ಫಲವಿಲ್ಲ. ಜೀವವೆತ್ತಿ ಸಾರ್ಥಕವಿಲ್ಲ. ಎಂಬುದ
ತನ್ನ ಕೆಳದಿಗೆ ಉತ್ತರ ಹೇಳುತ್ತ ಇತ್ತ ತನ್ನ ಪ್ರೀತಿಯ ಪತಿಯನ್ನ
ಕುರಿತು,

"ಕರುಳು, ಬೆರಳು, ಮುಡುಹು ಮುಂಬಲ್ಲಕೊಳ್ಳು.
ನಿರಯನಿಕ್ಕಿ ದಾಂಟದಡೆ ಅಂತೆನ್ನ ನಂಬದಿರು.
ಪರಪುರುಷರ ಮುಖವ ನೋಡದಂತೆ ಮಾಡಾ!
ಬಳಿಕ ನೀನೇ ಹೇಗೆ ಇರಿಸಿದಂತೆ ಇರಿಸಾ!
ಎನ್ನ ಉರದಲ್ಲಿ ಕೂ. ಸಂಗಯ್ಯನೆಂದು ಬರೆಯಾ!
ಹರಿ ಬ್ರಹ್ಮರಿಗೆರಗದಂತೆ ಬಳಿ ನೀರನೆರೆಯಾ."

ಸಖಿಯ ಮಾತಿಗೆ ಬಸವಿದೇವಿಯ ಮನಸ್ಸು ಕೊಂಚ ಕದಡಿರಬೇಕು.
ಆದಕ್ಕಾಗಿ ಅವಳು ತನ್ನ ಜೊತೆಗಾರಳ ಎದುರಿಗೇನೆ, ದೇವಾ, ಪರಂಗೆ
ಸುವ ಚಪಲಚಿತ್ತವನ್ನು ನನಗೆ ತಾರದಿರು,–ತಂದು ತಳ್ಳದಿರು. ಕೈಚಾಚು
ವಂತೆ, ಕಣ್ ನೋಡುವಂತೆ ಮಾಡದಿರು, ಮಾಡಿದರೆ ನಂಬದಿರು,
ಮನಸ್ಸು ತುಡುಗುಣಿ. ತಪ್ಪಿ ಒಂದುವೇಳೆ ಎಲ್ಲಿಗಾದರೂ ಹೋದರೆ
ಇದು ನಿನ್ನದೆಂದು ಅವರು ಗುರುತಿಸುವಂತೆ ನಿನ್ನ ನಾಮ ಮುದ್ರೆಯನ್ನು
ಆಚ್ಚೊತ್ತು. ಹರಿಬ್ರಹ್ಮರಿಗೆರಗದಂತೆ, ನಿನ್ನ ಬಳಿವಿಡಿದಿರುವಂತೆ ತೆರಪು
ಗೊಡು ಎಂದು ಎದೆಯಾರೆ ಪ್ರಾರ್ಥಿಸುತ್ತಾಳೆ.

ಪರದೈವಕ್ಕೆರಗುವುದು, ಪರಪುರುಷನ ನೆರೆವುದು – ಪರನಿಷ್ಠೆಗೆ

ಪಾತಿವ್ರತ್ಯಕ್ಕೆ ಹಾನಿ, ಆ ಪರಮದೈವಕ್ಕೂ ಪ್ರಾಣಪತಿಗೂ ಮೋಸ ಗೊಳಿಸಿದ ಪಾಪ. ಆದರಿಂದ ಅನೇಕ ನೋವು ಸಾವುಗಳನ್ನು ತಿನ್ನ ಬೇಕಾಗುತ್ತದೆ. ಆ ಚಿತ್ರಹಿಂಸೆಯ ಚಿತ್ರವನ್ನು ಇಲ್ಲಿ ನೋಡಿ!

"ಹಾದರಕ್ಕೆ ಹೋದರೆ ಕಳ್ಳ ದಮ್ಮನಾಯಿತ್ತು.
ಹಾಳು ಗೋಡೆಗೆ ಹೋದರೆ ಚೇಳೂರಿತ್ತು.
ಅಬ್ಬರವ ಕೇಳಿ ತಳವಾರನುಟ್ಟ ಸೀರೆಯ ಸುಲಿದ.
ನಾಚಿ ಹೋದರೆ ಮನೆಯ ಗಂಡ ಬೆನ್ನ ಬಾರನೆತ್ತಿದ.
ಅರಸು ಕೂ. ಸಂ. ದೇವ ದಂಡವ ಕೊಂಡ.

ಪರದೈವಕ್ಕೆರಗುವವರು, ಪರಪುರುಷನಿಗೆಳಸುವವರು ಪಡುವ ಪಾಡನ್ನು ಕೆಡುವ ಕೇಡನ್ನು ಬಸವಿದೇವಿಯು ಬಲು ಸೊಗಸಾಗಿ ಚಿತ್ರಿಸಿದ್ದಾಳೆ. ಏನು ನಿಸರ್ಗ ಚಿತ್ರ! ಏನು ಭಯಂಕರ ದೃಶ್ಯ. ಇದನರಿತೆ ಬಸವಿ ದೇವಿಯು ತನ್ನ ಪ್ರಾಣಪ್ರಿಯನಿಗೆ 'ಹರಿಬ್ರಹ್ಮರಿಗೆರಗದಂತೆ ಬಳಿ ನೀರ ನೆರೆಯಾ!' ಎಂದು ಮನಸಾರೆ ಮೊರೆಯಿಟ್ಟಿದ್ದಾಳೆ.

ಪರಮಾತ್ಮನು ಬಹು ಪತ್ನೀಕ. ಆತನಿಗೆ ಅನೇಕ ಶರಣಸತಿಯ ರುಂಟು. ಅವರುಗಳನ್ನೆಲ್ಲ ರಕ್ಷಿಸುವ ಭಾರ ಆತನದು. ಅದುಕಾರಣ ಆತನು ಒಮ್ಮೊಮ್ಮೆ ಮಾತು ಹೇಳಿಯೂ ಬಾರದೆ ಹೋಗುವ ಪ್ರಸಂಗ ಬೀಳುತ್ತಿತ್ತು. ಹಾಗಾದಾಗ ಬಸವಿದೇವಿಯ ಬಳಲಿಕೆಗೆ ಪಾರವೇ ಇಲ್ಲ ದಾಗುವುದು :

"ಬಂದಿಹೆನೆಂದು ಬಾರದಿದ್ದರೆ
ಬಟ್ಟೆಗಳ ನೋಡುತ್ತ ಇದ್ದೆನಯ್ಯ.
ಇನ್ನಾರನಟ್ಟುವೆ, ಇನ್ನಾರನಟ್ಟುವೆ?
ಇನ್ನಾರ ಪಾದವ ಹಿಡಿವೆನಯ್ಯ........?"

ಶರಣರನು ಕರೆಕಳುಹೋಣವೆಂದರೆ ಅವರಿಗೆ ಸವತಿ ಮತ್ಸರ. ಅವರನ್ನೆ ಕಳುಹಿದರೆ ಇನ್ನೇನು ವಿಪರೀತಕ್ಕೆ ಎಡೆಯಾಗುತ್ತದೆಯೋ ಬೇರೆ ಕಾಣೆ. ಮಾಯಬಂದ ಗಾಯ ಮತ್ತೆ ಹೊಸ ಹುಣ್ಣಾದರೆ ಸೈರಿಸುವುದು ಹೇಗೆ? ಇದಾವುದೂ ಸರಿಯಲ್ಲ. 'ಕೂಡಲ ಸಂಗನು ಬಾರದಿದ್ದರೆ ಅಟ್ಟುವೆನೆನ್ನ ಪ್ರಾಣವನು.' ಎಂಬುದಾಗಿ ಕೊನೆಯಲ್ಲಿ ನಿರ್ಧರಿಸುವಳು. ಹಾಗೆಯೆ

ನಡೆದುಕೊಳ್ಳುವಳು. ಏಕೆಂದರೆ ಹಾಗೆ ಮಾಡದೆ ಅವಳಿಗೆ ವಿಧಿಯಿಲ್ಲ. ಅವಳದು ಈಗ ಹೆಂಗರುಳು. ಸುಮಕೋಮಲ ಸ್ವಭಾವ ಆದ್ದ. ಆತನನ್ನಗಲಿ ಅವಳಿಗೆ ಇರಲು ಸಾಧ್ಯವಾಗುತ್ತಿರಲಿಲ್ಲ. ನಿಮಿಷ ವ ವಾಗುತ್ತಿತ್ತು.

"ಕಂಡರೆ ಮನೋಹರವಯ್ಯ.
ಕಾಣದಿದ್ದರೆ ಅವಸ್ಥೆ ನೋಡಯ್ಯ.
ಹಗಲಿರುಳಹುದು, ಇರುಳು ಹಗಲಹುದು.
ಎಂತಯ್ಯ? ಅಳವಾಡಿ ಕಳೆವೆನು.
ಒಂದು ಜುಗ ಮೇಲೆ ಕೆಡದಂತೆ.
ಕೂ. ಸಂಗನನಗಲುವ ಥಾವತಿಯಿಂದ
ಮರಣವೇ ಲೇಸು ಕಂಡಯ್ಯ."

ಅವಳ ಈ ಅವಸ್ಥೆಗೆ ತುದಿಮೊದಲಿರುತ್ತಿರಲಿಲ್ಲ. ಯಾರಾದರು ಹ ದವರು ಅವಳ ಈ ಮನೋವೇದನೆಯನ್ನು ಮನಗಂಡು,– ಇದು ಸ ಸರಿಯಲ್ಲ. ಇಷ್ಟೊಂದು ಥಾವಂತ ಇಟ್ಟುಕೊಂಡರೆ ಹೇಗೆ? ಹೊರಗಿನ ಕಂಡರೆ ಏನೆಂದಾರು?—ಎಂಬುದಾಗಿ ಹೇಳಿ, ಕೇಳಿದರೆ;

"ಭಕ್ತಿರತಿಯ ವಿರಳತೆಯ ಯುಕುತಿಯ
ಏನ ಬೆಸಗೊಂಬಿರಯ್ಯ?
ಕಾಮಿಗುಂಟೆ ಲಜ್ಜೆನಾಚಿಕೆ? ಕಾಮಿಗುಂಟೆ ಮಾನಾಪಮಾನ?
ಕೂ. ಸಂಗನಿಗೊಲಿದ ಮರುಳನೇನ ಬೆಸಗೊಂಬಿರಯ್ಯ?"

ಎಂದು ಅವರಿಗೆ ಎದುರು ಹೇಳುತ್ತಿದ್ದಳು,

ಹೀಗೆ ಬಸವಿದೇವಿಯು ತನ್ನ ಪತಿಯೊಡನೆ ಮೆಚ್ಚಿನ ಮತ್ತು ಆ ಕೆಚ್ಚಿನ ಸಂಸಾರವನ್ನು ಸಾಗಿಸುತ್ತಿರಲು, ಒಂದು ದಿನ ತಾನು ಕನ್ನೆಯ ದ್ದಾಗ ತನ್ನನ್ನು ಸಲುಹಿದ ಪ್ರಮಥರು ತನ್ನ ಮನೆಗೆ ಬರುವರೆಂಬ ಸು ಬರುವುದು. ಅದನ್ನು ಕೇಳಿ ಅವಳ ಸಂತೋಷಕ್ಕೆ ಮೇರೆಯೇ ಇಲ್ಲದಾ ಉತ್ಸಾಹ ಉಕ್ಕಿ ಉಕ್ತಿಗಳಾಗಿ ಹೀಗೆ ಹೊರಸೂಸಿವೆ:

"ಇಂದೆನ್ನ ಮನೆಗೆ ಪ್ರಮಥರು ಬಂದಿಹರೆಂದು
ಗುಡಿಯ ತೋರಣವ ಕಟ್ಟ, ಷಡುಸಮ್ಮಾರ್ಜನೆಯ ಮಾಡಿ,

ರಂಗವಲಿಯನಿಕ್ಕಿ ಉಘೇ- ಚಾಂಗು - ಭಲಾ ಎಂಬೆ.
ಕೂ. ಸಂಗನ ಶರಣರು ತಮ್ಮ ಒಕ್ಕುದನಿಕ್ಕಿ ಸಲುಹಿದರಾಗಿ"

—ಅಲ್ಲದೆ,

ಗಿಳಿಯ ಹಂಜರವಿಕ್ಕಿ, ಸೊಡರಿಂಗೆಣ್ಣೆಯ ನೆರೆದು,
ಬತ್ತಿಯನಿಕ್ಕಿ ಬರುವ ಹಾರುತ್ತಿರ್ದೆನಲಗವ್ವ.
ತರಗೆಲೆ ಗಿರಿಕೆಂದಡೆ ಹೊರಗನಾಲಿಸುವೆ.
ತೋರದಿರೆನ್ನ ಮನ ಧಿಗಿಲೆಂದಿತ್ತೆಲಗವ್ವ.
ಕೂ. ಸಂಗನ ಶರಣರು ಬಂದು ಬಾಗಿಲ ಮುಂದೆ ನಿಂದು
'ಶಿವಾ' ಎಂದೊಡೆ ಸಂತೋಷಬಟ್ಟೆನಲಗವ್ವ."

ಬಸವಿದೇವಿಯು ಹೀಗೆ ಲೋಕೋತ್ತರವಾದ ಬದುಕಿನೊಡನೆ ಬಾಳುತ್ತಿರಲು ಸ್ತ್ರೀಗುಣ ಸಹಜವಾಗಿ ಅವಳಿಗೊಬ್ಬ ಪುತ್ರನ ಪಡೆವ ಅಭಿಲಾಷೆ ಹುಟ್ಟುವುದು. ಅ ಅಭಿಲಾಷೆಯನ್ನು ಅವಳೇ ಈ ರೀತಿ ಆಡಿ ತೋರಿಸಿದ್ದಾಳೆ: 'ಕೂಡಲ ಸಂಗಮದೇವನಂತಪ್ಪ ಮಗ ಹುಟ್ಟಿದರೆ, ಇದ್ದನಯ್ಯ ಕಾಯಮಾತೆಯಾಗಿ ಜೀವಪಿತನಾಗಿ ನೀನಿರಿಸಿದಂತೆ'—ಎಂಬುದು ಅವಳ ಬಯಕೆ. ಅವಳ ಮಗ ಅವಳ ಪತಿಯಂತೆಯೆ ಇರಬೇಕಂತೆ. ಕಾಯ ಜೀವನ ಪೋಷಣೆಯಲ್ಲಿ ಬೆಳೆದು ಪಿತನಾಜ್ಞೆಯಂತೆ ಬಾಳುವವನಾಗಬೇಕಂತೆ—ಇದು ಅವಳ ಹೃದಯ ಹರಕೆ. ಕೆಲವು ದಿನ ಕಳೆದ ಮೇಲೆ ಅದರಂತೆ ಅವಳಿಗೆ ಅವಳ ಪುಣ್ಯದ ಫಲವಾಗಿ ಒಬ್ಬ ಶುದ್ಧಾತ್ಮ ಸತ್ಪುತ್ರನು ಹುಟ್ಟುವನು. ಆನಂದವುಕ್ಕಿ ಲಾಲಿ ಹಾಡುವಳು. ಆತ್ಮಲೋಲಳಾಗುವಳು. ಆ ಮಗುವೇ ಅವಳ ಜೀವನಸರ್ವಸ್ವ. ಅವಳ ಬಾಳಿನ ಬದುಕು—ಬಿನ್ನಾಣ.

ಮತ್ತೆ ಕೆಲವು ವರುಷ ಕಳೆಯಲು ಒಬ್ಬ ಮಗಳ ಭಾಗ್ಯವೂ ಬಸವಿದೇವಿಗೆ ಒದಗಿದೆ. ಮಗಳನ್ನು ಮಮತೆಯಿಂದ ಸಾಕಿ ಸಲಹಿದ್ದಾಳೆ. ಪ್ರಾಪ್ತವಯಸ್ಕಳಾಗಲು ಕೂಡಲ ಸಂಗಯ್ಯನಿಗೆ ಕೊಟ್ಟು ಮದುವೆ ಮಾಡಿದ್ದಾಳೆ. ಮಗಳನ್ನು ಗಂಡನೂರಿಗೆ ಕಳುಹುವಾಗ ತಾಯ್ತನಕ್ಕೆ ತಕ್ಕ ತಿಳಿವನ್ನು ಬೋಧಿಸುತ್ತಾಳೆ. ಅವಳ ಮಗಳು ಬಲು ದಿಟ್ಟೆಯಾಗಿದ್ದಳು. ಅದಕ್ಕಾಗಿ, 'ಅಳಿಯನ ಕಂಡರೆ ನಾಚೆಂಬೆ ಮಗಳೆ. ಅಳಿಯನ ಕಂಡರೆ ತೊಲಗೆಂಬೆ

ಮಗಳೆ'—ಎಂದು ತಿಳಿ ಹೇಳತೊಡಗುವಳು. ಅಷ್ಟರಲ್ಲಿ ಅಳಿಯನಾ
ಆತನೆದುರಿಗೆ ಮರೆಯೆಂದರೇನು? ಆತನಲ್ಲಿ ಒಡವೆರೆದ ಬಳಿಕ
ತಾವೆಲ್ಲಿ:—ಎಂಬ ಅರಿವಾಗುವುದು. ಆ ಕೂಡಲೆ ಮರಳಿ—'ನಾ
ಮರೆಯಿಲ್ಲ. ತೊಲಗುವರೆ ನೆಲಸಿಲ್ಲ. ಇಬ್ಬರಿಗೊಬ್ಬ ಗಂಡನಾದ ಬ
ಇನ್ನೆಲ್ಲಿಯ ಮರೆ ಮಗಳೆ? ಕೂ. ಸಂ. ದೇವನೆಂಬ ಗಂಡನಾದ ಬ
ಇನ್ನೆಲ್ಲಿಯ ಮರೆ ಮಗಳೆ' ಎಂದು ಸಮಾಧಾನ ಹೇಳುವಳು. ಶಾ
ಳಾಗುವಳು.

ಇದು ಬಸವಿದೇವಿಯ ಭಾವದಾಂಪತ್ಯ ಜೀವನ; ಅಪ್ಪ
ಜೀವನ. ಆ ಉಜ್ಜೀವನದ ಅನುಭವದಿಂದೊಗೆದ ಆಣಿಮುತ್ತುಗಳನ್ನ
ಅಂಡವಾಗಿ ಸರ ಹೆಣೆದಿದ್ದಾಳೆ. ಶರಣ ಸತೀರತ್ನ ಸಮುದಾಯವನ್ನು ಸಂ
ಗೊಳಿಸಿದ್ದಾಳೆ; ಶಿರೋಭೂಷಣಳಾಗಿದ್ದಾಳೆ."

'ಚರಮ ಬದುಕಿ'ನಲ್ಲಿ ಬಸವಣ್ಣನ ಭಕ್ತಿಯ ಆವೇಗ, ಆತ್ಮ ನಿ
ದನ, ಷಟ್‌ಸ್ಥಲಾಚರಣಗಳನ್ನು ಮಾರ್ಮಿಕವಾಗಿ ಶ್ರೀಗಳವರು ನಿ
ಪಿಸಿದ್ದಾರೆ.

ಬಸವಣ್ಣನ ಬದುಕನ್ನು ಕ್ರೋಢೀಕರಿಸಿ ಅವನ ಜೀವನ, ಸಂದೇ
ಸಮಗ್ರ ಚಿತ್ರವನ್ನು ಶ್ರೀಗಳವರು ಕೆಲವೇ ಮಾತುಗಳಲ್ಲಿ ಕೊಟ್ಟಿದ್ದಾರೆ.

"ಎಲ್ಲರದೂ ಒಂದು ರೀತಿಯ ಬದುಕಾದರೆ ಬಸವಣ್ಣನ
ಬೇರೊಂದು ಬಗೆಯ ಬದುಕು. ಎಲ್ಲರದು ಸೃಷ್ಟಿಯ ಮತ್ತು ವ್ಯಷ್ಟಿ
ಬದುಕಿನಲ್ಲಿಯೆ ದೃಷ್ಟಿ. ಅಣ್ಣನದು ಸೃಷ್ಟಿಯ ಜೊತೆಗೆ ಅತಿ ಸೃಷ್ಟಿ
ವ್ಯಷ್ಟಿಯ ಜೊತೆಗೆ ಸಮಷ್ಟಿಜೀವನದ ದೃಷ್ಟಿ. ಸಮಸ್ತ ಲೌಕಿಕ ವ್ಯವಹಾ
ಗಳಲ್ಲಿ ಉದ್ಯಮಗಳಲ್ಲಿ ಪಾರಮಾರ್ಥಿಕ-ಅನುಭವದ ಬೆಸುಗೆ. ಹಾನಿವೃ
ಗಳಿಗೆ-ಮಾನಾಪಮಾನಗಳಿಗೆ ಕುಗ್ಗಿ-ಹಿಗ್ಗುವುದು ಮಾನವ ಸ್ವಭಾವ. ಇ
ಗಳನ್ನು ಮೀರಿರುವುದು ಮಹಾತ್ಮ ಸ್ವಭಾವ. ಇದನ್ನು ಅಣ್ಣನ ಬದುಕಿನ
ನಿಟ್ಟಿಸಬಹುದು.

ಬಸವಣ್ಣನಿಗೆ ಎಲ್ಲಕ್ಕಿಂತಲೂ ಭಕ್ತಿಯೆಂದರೆ ಬಹು ಪ್ರೀತಿ. ಭ
ಯನ್ನು ಮಾಡುತ್ತಾ ಭೌತಿಕ ದೇಹ ನೀಗಿ ಭಗವಂತನಲ್ಲಿ ಬೆರೆವುದೇ ಆತ
ಜೀವಿತ ಲಕ್ಷ್ಯ. ಭವಿಗಳನ್ನು ಭಕ್ತರನ್ನಾಗಿಸುವುದೇ ಆತನ ಪರ

ಜೀವನ. ಮಾನವ ಸಹಜವಾದ ಹಕ್ಕುಗಳನ್ನು ಹಲವರು ಮಾತ್ರ ಅನು ಭವಿಸುವುದು ಆತನಿಗೆ ಸಹಿಸದು. ಮೇಲು ಕೀಳು, ಜಾತಿ, ವಿಜಾತಿ, ಇತ್ಯಾದಿ ಕಲ್ಪನೆಗಳು ಕುತ್ಸಿತವಾದವುಗಳು, ಸ್ವಾರ್ಥ ಸಂಕುಚಿತಗಳಿಂದ ಪರಿಪೂರಿತ ವಾದವುಗಳು. ಇವು ತೊಲಗಬೇಕು. ಅನೀತಿ, ಅನ್ಯಾಯ ಅತ್ಯಾಸೆಗಳು ಮಾನವತ್ವವನ್ನೇ ಅಳಿಸತಕ್ಕವು. ಇವುಗಳಿಂದ ಎಲ್ಲರೂ ದೂರವಾಗಬೇಕು. ಲೌಕಿಕಾಲೌಕಿಕ ಜೀವನಗಳೆರಡನ್ನೂ ಹಸನಾಗಿರಿಸಬೇಕು; ಹದುಳಿಗರಾಗಿರ ಬೇಕು – ಎಂಬುದೇ ಅಣ್ಣನ ಸತ್ಯಸಂಕಲ್ಪ. ಈ ಕೆಲಸದಲ್ಲಿ ಆತನು ಹೊತ್ತು ಗೊತ್ತುಗಳನರಿಯ. ಜಾತಿ ಸೂತಕಗಳನೆಣಿಸ. ಕಷ್ಟ ನಷ್ಟಗಳ ಗಣಿಸ. ಹೆಣ್ಣು ಗಂಡೆಂದು ಕವಲಿಸ. ಎಲ್ಲರೂ ಒಬ್ಬುಳಿಗೂಡಿ ಭಕ್ತಿರಸಾವೇಶದಿಂದ ಆಡಿ ಹಾಡಿ ತಣಿಯುತ್ತಿರಬೇಕು. ಅದನ್ನು ತಾನು ಕಣ್ತುಂಬ ನೋಡಿ ಸಂತೃಪ್ತಿಪಡಬೇಕು. ಆ ಸಮಯದಲ್ಲಿ ಘೋರ ಪ್ರಳಯ ಘರ್ಜನೆಯಾದರೂ ಕೇಳದು. ಮುಗಿಲು ಹರಿದು ಮೇಲೆ ಕುಪ್ಪಳಿಸಿದರೂ ಲಕ್ಷಿಸನು. ಆತನಿಗೆ ಅದೇ ಆನಂದ; ಅದೇ ಬದುಕು.

ಭಕ್ತಿ ಬರಿ ಬುದ್ಧಿಯ ಕಾರ್ಯವಲ್ಲ. ಪಾಂಡಿತ್ಯದ ಪ್ರತಿಭೆಯಲ್ಲ. ಅದು ನಿರ್ಮಲವಾದ ಹೃದಯ ಚಿಲುಮೆಯಿಂದ ಚಿಮ್ಮಿ ಹೊಮ್ಮಿ ಬರುವ ರಸದ ಸೆಲೆಯು. ಅದು ಬೆಂದ ಬಾಳನ್ನು ತಂಪುಗೊಳಿಸುತ್ತದೆ. ಮುಕ್ತಿ ಕಲ್ಪತರುವಿನ ಬೇರನ್ನು ನೆನಸಿ, ಮುಗುಳಿಡಿಸಿ ಹೂವಾಗಿಸಿ ಮುಕ್ತಾಫಲಗಳಾಗು ವಂತೆ ಮಾಡುತ್ತದೆ. ಆ ಭಕ್ತಿ ಪ್ರವಾಹದ ಮೇಲೆ ನೀರ ಬೊಬ್ಬಳಿಕೆಯಂತೆ ತೇಲುವ ಭವರೋಗ, ಅಪಮೃತ್ಯು, ಅರಿಷಡ್ವರ್ಗಾದಿಗಳು ತಕ್ಷಣವೆ ಒಡೆದು ಹೋಗುತ್ತವೆ. ಭಕ್ತಿ – ಮುಕ್ತಿ ಎರಡೂ ಸಂಗಮವಾಗಿ ಸಮರಸವಾಗಿ ಮಂಜುಳವಾಗಿ ಹರಿಯುತ್ತವೆ. ಮಡುಗಟ್ಟಿ ನಿಲ್ಲುತ್ತವೆ. ಭಕ್ತಿಯಲ್ಲಿ ಭಾವದ ಬೆಸುಗೆಯಿದೆ; ಭವ್ಯಾಂಶವಿದೆ.

ಬಸವಣ್ಣ ಭಕ್ತಿಯ ಬದುಕಿಗೆ ಹೃದಯವನ್ನು, ಹೃದಯಕ್ಕೆ ಭಕ್ತಿಯ ಬದುಕನ್ನು - ಹೀಗೆ ಒಂದಕ್ಕೊಂದನ್ನು ಮುಡುಪಿಟ್ಟು ಆತ್ಮೀಯತೆಯನ್ನು ಕಲ್ಪಿಸಿಕೊಂಡಿದ್ದಾನೆ. ಆತನ ಹೃದಯ ಬೇರೆಯಲ್ಲ; ಭಕ್ತಿ ಬೇರೆಯಲ್ಲ; ಅದು ಅಂತರಾತ್ಮನಾದ ಕೂಡಲ ಸಂಗನ ವಿರಹಾಗ್ನಿಯಲ್ಲಿ ತಪ್ತವಾಗಿ ಅಪ ರಂಜಿಯಾಗಿ ವಚನ ರಚನೆಯಲ್ಲಿ ಮೆರಗುತ್ತಿದೆ. ಮಹೋನ್ನತವಾಗಿದೆ.

ಮಗಳೆ'—ಎಂದು ತಿಳಿ ಹೇಳತೊಡಗುವಳು. ಅಷ್ಟರಲ್ಲಿ ಆಳಿಯನಾರು! ಆತನೆದುರಿಗೆ ಮರೆಯೆಂದರೇನು? ಆತನಲ್ಲಿ ಒಡವೆರೆದ ಬಳಿಕ ಬೇ ತಾವೆಲ್ಲಿ:—ಎಂಬ ಅರಿವಾಗುವುದು. ಆ ಕೂಡಲೆ ಮರಳಿ—'ನಾಚುವ ಮರೆಯಿಲ್ಲ. ತೊಲಗುವರೆ ನೆಲಸಿಲ್ಲ. ಇಬ್ಬರಿಗೊಬ್ಬ ಗಂಡನಾದ ಬಳಿ ಇನ್ನೆಲ್ಲಿಯ ಮರೆ ಮಗಳೆ? ಕೂ. ಸಂ. ದೇವನೆಂಬ ಗಂಡನಾದ ಬಳಿ ಇನ್ನೆಲ್ಲಿಯ ಮರೆ ಮಗಳೆ' ಎಂದು ಸಮಾಧಾನ ಹೇಳುವಳು. ಶಾಂ ಳಾಗುವಳು.

ಇದು ಬಸವಿದೇವಿಯ ಭಾವದಾಂಪತ್ಯ ಜೀವನ; ಅಪೂ ಜೀವನ. ಆ ಉಜ್ಜೀವನದ ಅನುಭವದಿಂದೊಗೆದ ಆಣಿಮುತ್ತುಗಳನ್ನ ಅಂದವಾಗಿ ಸರ ಹೆಣೆದಿದ್ದಾಳೆ. ಶರಣ ಸತೀರತ್ನ ಸಮುದಾಯವನ್ನು ಸಂತ ಗೊಳಿಸಿದ್ದಾಳೆ; ಶಿರೋಭೂಷಣಳಾಗಿದ್ದಾಳೆ."

'ಚರಮ ಬದುಕಿ'ನಲ್ಲಿ ಬಸವಣ್ಣನ ಭಕ್ತಿಯ ಆವೇಗ, ಆತ್ಮ ನಿವೇ ದನ, ಷಟ್‌ಸ್ಥಲಾಚರಣಗಳನ್ನು ಮಾರ್ಮಿಕವಾಗಿ ಶ್ರೀಗಳವರು ನಿರೂ ಪಿಸಿದ್ದಾರೆ.

ಬಸವಣ್ಣನ ಬದುಕನ್ನು ಕ್ರೋಢೀಕರಿಸಿ ಅವನ ಜೀವನ, ಸಂದೇಶ ಸಮಗ್ರ ಚಿತ್ರವನ್ನು ಶ್ರೀಗಳವರು ಕೆಲವೇ ಮಾತುಗಳಲ್ಲಿ ಕೊಟ್ಟಿದ್ದಾರೆ.

"ಎಲ್ಲರದೂ ಒಂದು ರೀತಿಯ ಬದುಕಾದರೆ ಬಸವಣ್ಣನದೇ ಬೇರೊಂದು ಬಗೆಯ ಬದುಕು. ಎಲ್ಲರದು ಸೃಷ್ಟಿಯ ಮತ್ತು ವ್ಯಷ್ಟಿಯ ಬದುಕಿನಲ್ಲಿಯೆ ದೃಷ್ಟಿ. ಅಣ್ಣನದು ಸೃಷ್ಟಿಯ ಜೊತೆಗೆ ಅತಿ ಸೃಷ್ಟಿಯ, ವ್ಯಷ್ಟಿಯ ಜೊತೆಗೆ ಸಮಷ್ಟಿಜೀವನದ ದೃಷ್ಟಿ. ಸಮಸ್ತ ಲೌಕಿಕ ವ್ಯವಹಾ ಗಳಲ್ಲಿ ಉದ್ಯಮಗಳಲ್ಲಿ ಪಾರಮಾರ್ಥಿಕ-ಅನುಭವದ ಬೆಸುಗೆ. ಹಾನಿವೃದ್ಧಿ ಗಳಿಗೆ-ಮಾನಾಪಮಾನಗಳಿಗೆ ಕುಗ್ಗಿ-ಹಿಗ್ಗುವುದು ಮಾನವ ಸ್ವಭಾವ. ಇವ ಗಳನ್ನು ಮೀರಿರುವುದು ಮಹಾತ್ಮ ಸ್ವಭಾವ. ಇದನ್ನು ಅಣ್ಣನ ಬದುಕಿನಲ್ಲಿ ನಿಟ್ಟಿಸಬಹುದು.

ಬಸವಣ್ಣನಿಗೆ ಎಲ್ಲಕ್ಕಿಂತಲೂ ಭಕ್ತಿಯೆಂದರೆ ಬಹು ಪ್ರೀತಿ. ಭಕ್ತಿ ಯನ್ನು ಮಾಡುತ್ತಾ ಭೌತಿಕ ದೇಹ ನೀಗಿ ಭಗವಂತನಲ್ಲಿ ಬೆರವುದೇ ಆತನ ಜೀವಿತ ಲಕ್ಷ್ಯ. ಭವಿಗಳನ್ನು ಭಕ್ತರನ್ನಾಗಿಸುವುದೇ ಆತನ ಪರಮ

ಜೀವನ. ಮಾನವ ಸಹಜವಾದ ಹಕ್ಕುಗಳನ್ನು ಹಲವರು ಮಾತ್ರ ಅನುಭವಿಸುವುದು ಆತನಿಗೆ ಸಹಿಸದು. ಮೇಲು ಕೀಳು, ಜಾತಿ, ವಿಜಾತಿ, ಇತ್ಯಾದಿ ಕಲ್ಪನೆಗಳು ಕುತ್ಸಿತವಾದವುಗಳು, ಸ್ವಾರ್ಥ ಸಂಕುಚಿತಗಳಿಂದ ಪರಿಪೂರಿತವಾದವುಗಳು. ಇವು ತೊಲಗಬೇಕು. ಅನೀತಿ, ಅನ್ಯಾಯ ಅತ್ಯಾಸೆಗಳು ಮಾನವತ್ವವನ್ನೇ ಅಳಿಸತಕ್ಕವು. ಇವುಗಳಿಂದ ಎಲ್ಲರೂ ದೂರವಾಗಬೇಕು. ಲೌಕಿಕಾಲೌಕಿಕ ಜೀವನಗಳೆರಡನ್ನೂ ಹಸನಾಗಿರಿಸಬೇಕು; ಹದುಳಿಗರಾಗಿರಬೇಕು – ಎಂಬುದೇ ಅಣ್ಣನ ಸತ್ಯಸಂಕಲ್ಪ. ಈ ಕೆಲಸದಲ್ಲಿ ಆತನು ಹೊತ್ತುಗೊತ್ತುಗಳನರಿಯ. ಜಾತಿ ಸೂತಕಗಳನೆಣಿಸ. ಕಷ್ಟ ನಷ್ಟಗಳ ಗಣಿಸ. ಹೆಣ್ಣು ಗಂಡೆಂದು ಕವಲಿಸ. ಎಲ್ಲರೂ ಒಬ್ಬುಳಿಗೂಡಿ ಭಕ್ತಿರಸಾವೇಶದಿಂದ ಆಡಿ ಹಾಡಿ ತಣಿಯುತ್ತಿರಬೇಕು. ಅದನ್ನು ತಾನು ಕಣ್ತುಂಬ ನೋಡಿ ಸಂತೃಪ್ತಿಪಡಬೇಕು. ಆ ಸಮಯದಲ್ಲಿ ಘೋರ ಪ್ರಳಯ ಘರ್ಜನೆಯಾದರೂ ಕೇಳದು. ಮುಗಿಲು ಹರಿದು ಮೇಲೆ ಕುಪ್ಪಳಿಸಿದರೂ ಲಕ್ಷಿಸನು. ಆತನಿಗೆ ಅದೇ ಆನಂದ; ಅದೇ ಬದುಕು.

ಭಕ್ತಿ ಬರಿ ಬುದ್ಧಿಯ ಕಾರ್ಯವಲ್ಲ. ಪಾಂಡಿತ್ಯದ ಪ್ರತಿಭೆಯಲ್ಲ. ಅದು ನಿರ್ಮಲವಾದ ಹೃದಯ ಚಿಲುಮೆಯಿಂದ ಚಿಮ್ಮಿ ಹೊಮ್ಮಿ ಬರುವ ರಸದ ಸೆಲೆಯು. ಅದು ಬೆಂದ ಬಾಳನ್ನು ತಂಪುಗೊಳಿಸುತ್ತದೆ. ಮುಕ್ತಿ ಕಲ್ಪತರುವಿನ ಬೇರನ್ನು ನೆನಸಿ, ಮುಗುಳಿಡಿಸಿ ಹೂವಾಗಿಸಿ ಮುಕ್ತಾಫಲಗಳಾಗುವಂತೆ ಮಾಡುತ್ತದೆ. ಆ ಭಕ್ತಿ ಪ್ರವಾಹದ ಮೇಲೆ ನೀರ ಬೊಬ್ಬುಳಿಕೆಯಂತೆ ತೇಲುವ ಭವರೋಗ, ಅಪಮೃತ್ಯು, ಅರಿಷಡ್ವರ್ಗಾದಿಗಳು ತಕ್ಷಣವೆ ಒಡೆದು ಹೋಗುತ್ತವೆ. ಭಕ್ತಿ – ಮುಕ್ತಿ ಎರಡೂ ಸಂಗಮವಾಗಿ ಸಮರಸವಾಗಿ ಮಂಜುಳವಾಗಿ ಹರಿಯುತ್ತವೆ. ಮಡುಗಟ್ಟಿ ನಿಲ್ಲುತ್ತವೆ. ಭಕ್ತಿಯಲ್ಲಿ ಭಾವದ ಬೆಸುಗೆಯಿದೆ; ಭವ್ಯಾಂಶವಿದೆ.

ಬಸವಣ್ಣ ಭಕ್ತಿಯ ಬದುಕಿಗೆ ಹೃದಯವನ್ನು, ಹೃದಯಕ್ಕೆ ಭಕ್ತಿಯ ಬದುಕನ್ನು - ಹೀಗೆ ಒಂದಕ್ಕೊಂದನ್ನು ಮುಡುಪಿಟ್ಟು ಆತ್ಮೀಯತೆಯನ್ನು ಕಲ್ಪಿಸಿಕೊಂಡಿದ್ದಾನೆ. ಆತನ ಹೃದಯ ಬೇರೆಯಲ್ಲ; ಭಕ್ತಿ ಬೇರೆಯಲ್ಲ; ಅದು ಅಂತರಾತ್ಮನಾದ ಕೂಡಲ ಸಂಗನ ವಿರಹಾಗ್ನಿಯಲ್ಲಿ ತಪ್ತವಾಗಿ ಅಪರಂಜಿಯಾಗಿ ವಚನ ರಚನೆಯಲ್ಲಿ ಮೆರಗುತ್ತಿದೆ. ಮಹೋನ್ನತವಾಗಿದೆ.

ಆತನ ನುಡಿ ಆತನ ಜೀವನದ ನಿಲುಗನ್ನಡಿ. ಅದರ ಬೆಲೆಯನ್ನು ಕಟ್ಟು ವುದು ನಮ್ಮಿಂದಾಗದು. ಇದು ಆತನ ರಕ್ತಿ ಜೀವನದ ಪರಮಾವಧಿ ಪರಾಕಾಷ್ಠದೆಶೆ.

ತಾನೊಬ್ಬನಾಗಲಿ, ತನ್ನವರು ಮಾತ್ರವಾಗಲಿ ಆ ಭಕ್ತಿ ಬದುಕಿನಲ್ಲಿ ಸುಖವಾಗಿರುವುದು ಅಣ್ಣನ ಬುದುಕಲ್ಲ, ಬಯಕೆಯಲ್ಲ. ಸಕಲ ಜೀವಾತ್ಮರು ಸಕಲ ವಿಧದಲ್ಲಿ ಲೇಸಾಗಿರಬೇಕೆಂಬುದೇ ಅಣ್ಣನ ಬದುಕಿನ ಹೆದ್ದಾರಿ. ಸಕಲ ಜೀವಾತ್ಮ ತಾದಾತ್ಮ್ಯವೆ ಆತನ ಲೇಸಾದ ಬದುಕಿನ ಹೆಗ್ಗುರಿ. ಇದನ್ನು ಸಾಧಿಸಿ ಒಂದು ದಿನ ಬದುಕಿದರೆ ಸಾಕು. ವೃಥಾ ಮೋಹ, ಮಮತೆ, ಮದಾಂಧತೆ, ಮತ್ಸರ ಭಾವಗಳಿಂದ ಜಾತಿ ಅನೀತಿಗಳಿಂದ, ಕಾಮ ಕೋಪಗಳಿಂದ ನೂರು ವರುಷ ಬದುಕಿದರೂ ಫಲವಿಲ್ಲ. ಈ ಬದುಕು ಬದುಕಲ್ಲ. ಇದು ಬರಿ ಬಳಲಿಕೆ, ಭ್ರಮೆ. ಇದು ಕೊನೆಗೂ ಭವಕ್ಕೆ ಬೀಜ.

ಭೌತಿಕ ಭಾಗ್ಯ ಬದುಕಲ್ಲ; ಭೌತಿಕ ಭಾವನೆಯೇ ಜೀವನವಲ್ಲ. ಭಕ್ತಿಭಂಡಾರವೇ ನಿಜವಾದ ನಿತ್ಯವಾದ ಬದುಕು. ಮುಕ್ತಿ ಭಾವನೆಯೆ (ಇಹಪರಗಳೆರಡರಲ್ಲಿ) ನಿರ್ಮಲವಾದ ಜೀವನ. ಅಣ್ಣನ ಆ ಬಗೆಯ ಬದುಕಿನಲ್ಲಿ ಆತನ ಸೂಕ್ಷ್ಮದರ್ಶನ, ಆತ್ಮಸಾಧನ, ವಿಶ್ವದಯೆ, ವಿಶಾಲ ಹೃದಯ ಎಂಥವಿದ್ದವೆಂಬುದು ಅಭಿವ್ಯಕ್ತವಾಗುತ್ತದೆ. ಆತನ ಆತ್ಮ ನಿವೇದನ ಆತನ ಬದುಕಿಗೊಂದು ಬಂಧುರ. ಆತನ ಆ ಅಮೃತ ಹೃದಯ ಸಂಗನ ಅಡಿದಾವರೆಯ ಬಂಡುಣಿ. ಈ ಬದುಕಿನಿಂದ ಅಣ್ಣನ ಕೀರ್ತಿ ಪ್ರಪಂಚವನ್ನು ತುಂಬಿದ್ದರೆ, ಆ ಬದುಕಿನಿಂದ ಅಣ್ಣನು ಪರಮಾತ್ಮನ ಪಾದ ಪದ್ಮದಲ್ಲಿ 'ತುಂಬಿ' ಆಗಿಹೋಗಿದ್ದಾನೆ. ಇದೇ ಅಣ್ಣನ ಬದುಕು. ಎಲ್ಲರೂ ಹೀಗಾಗುವುದೇ ಅಣ್ಣನಿಗೆ ಬೇಕು.

ಅಣ್ಣನು ತನ್ನ ವಚನದಲ್ಲಿ ಈ ಬದುಕನ್ನು ಬಿತ್ತರಿಸಿದ್ದಾನೆ. ಬಿಂಬಿಸಿ ದ್ದಾನೆ. ಅದನ್ನು ನೋಡುವ ಕಣ್ಣು, ಪ್ರತಿಬಿಂಬಿಸಿಕೊಳ್ಳುವ ಹೃದಯ ಹಸನಾಗಬೇಕು. ಇಲ್ಲದಲ್ಲಿ ಅದು ನಮ್ಮ ಮನಸ್ಸಿಗೆ ಬಾರದು. ಕಣ್ಣಿಗೆ ಕಾಣದು. ಅಣ್ಣನ ಆ ಭವ್ಯವಾದ ಬದುಕನ್ನು ನಮ್ಮೀ ಚರ್ಮ ಚಕ್ಷುಗಳು

ಹೇಗೆ ಕಂಡಾವು ? ಆತನ ಆ ರಕ್ತಿರಸವು ನಮ್ಮೀ ಭಕ್ತಿ ಹೃದಯಕ್ಕೆ ಹೇಗೆ ಅಂಟೀತು ?

" ಭಕ್ತಿಯೆಂಬ ಪೃಥ್ವಿಯ ಮೇಲೆ
ಗುರುವೆಂಬ ಬೀಜವಂಕುರಿಸಿ,
ಲಿಂಗವೆಂಬ ಎಲೆಯಾಯಿತ್ತು.
ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯಿತ್ತು.
ಆಚಾರವೆಂಬ ಕಾಯಾಯಿತ್ತು.
ನಿಷ್ಪತ್ತಿಯೆಂಬ ಹಣ್ಣಾಯಿತ್ತು.
ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಬಿಟ್ಟು
ಕಳಚಿ ಬೀಳುವಲ್ಲಿ ಕೂ. ಸಂ. ದೇವ
ತನಗೆ ಬೇಕೆಂದೆತ್ತಿ ಕೊಂಡ."

ಇದು ಅಣ್ಣನ ಬದುಕಿನ ಸಾರಸರ್ವಸ್ವ. ಹೀಗೆ ಕೊನೆಗೆ ಅಣ್ಣನೇ ಬದುಕಾಗಿ ಭಗವಂತನಿಗೆ ಸಲ್ಲುತ್ತಾನೆ. ಭಗವಂತನೇ ಆಗುತ್ತಾನೆ. ಹೀಗಾಗುವುದೇ ಮಾನವೀಯ ನಿಯಮ. ಹೀಗಿದ್ದರೂ ಕೇವಲ ಹೊರಗಿನ ಬದುಕಿಗಾಗಿಯೆ ಹೆಣಗುವರಲ್ಲದೆ ತಾವೇ ಬದುಕಾಗಲು ಹೆಣಗುವವರು ಅದೆಷ್ಟು ಜನ ? ಅದಕ್ಕಾಗಿ ತಮ್ಮ ಜೀವಿತದವಧಿಯಲ್ಲಿ ಮೀಸಲಾಗಿರಿಸುವುದು ಅದೆಷ್ಟು ದಿನ ? ಮರಳಿ ಕೇಳಿದರೆ ಅದೆಷ್ಟು ಕ್ಷಣ ?

ಒಟ್ಟನಲ್ಲಿ ಅಣ್ಣನ ಬದುಕು, ಮಾನವಪ್ರೇಮ. ದಯಾಧರ್ಮವಾದ. ನಿಷ್ಕಳಂಕ ನೀತಿ ಪ್ರವಕ್ತತೆ. ಸಾಮ್ಯಕಾರ್ಯಸಂಸಕ್ತತೆ. ಸತ್ಯ ಪರಿಪಾಲನೆ. ಸತ್ಯಶುದ್ಧವೃತ್ತಿ (ಕಾಯಕ) ಮತ್ತು ಶಕ್ತಿ ಶಿಕ್ಷಣ – ಪ್ರಚಾರಣ. ವಿಶ್ವವಿಶಾಲ ತತ್ವಜ್ಞಾನ. ಭಕ್ತಿಭಂಡಾರ. ಅಪಾರ ಭಾಷಾಭಿಮಾನ. ಅಸದೃಶ ರಾಜ್ಯದಾಡಳಿತಾನುಭವ. ಸ್ವಾರ್ಥತ್ಯಾಗ. ಸರ್ವಸಮಭೋಗ. ತಾಯ್ನುಡಿ ಜನನ. ನಿಮ್ನಜನೋದ್ಧರಣ. ಸ್ತ್ರೀಜನಸ್ವಾತಂತ್ರ್ಯ. ದೈವಭಕ್ತಿಪ್ರಸಾರ, ನಿರ್ವಂಚನ, ನಿರಹಂಭಾವ, ನಿಷ್ಕಪಟ ಸರಳ ಹೃದಯ, ಸದ್ವರ್ತನ – ಸತ್ಸಂಗ ಪ್ರಿಯತೆ. ದಾಸೋಹಧುರೀಣತೆ ಮಧುರ ಭಾವ ಪ್ರವೀಣತೆ. ನ್ಯಾಯ ಬದ್ಧವಾದ ಭೌತಿಕ ಸುಖ ಸೌಲಭ್ಯ. ಅಧ್ಯಾತ್ಮಿಕ ಶಾಂತಿ. ಮಹಾಕ್ರಾಂತಿ. ಕಾರಣಿಕತೆ. ವಿಶ್ವಧರ್ಮ ಸಂಸ್ಥಾಪನೆ. ಪರಿಪಾಲನೆ ; ಇತ್ಯಾದಿ.

ಬಸವಣ್ಣನವರ ಈ ಸರ್ವತೋಮುಖವಾದ ಬದುಕು, ಸತ್ಯಜೀವನ್ಮ ಆದರ್ಶ ಆದಾವ ಜನಾಂಗಕ್ಕೆ ಬೇಡ ? ಅದಾವ ಕಾಲಕ್ಕೆ ಬೇಡ ? ''*

ಶ್ರೀಗಳವರ ಗ್ರಂಥ ಕೆಲವು ಸಮಸ್ಯೆಗಳನ್ನು ತಂದೊಡ್ಡುತ್ತವೆ. ಬಸವಣ್ಣ ನಾಗಲಿ ಇತರ ವಚನಕಾರರಾಗಲಿ ಯಾವ ಸಂದರ್ಭಗಳಲ್ಲಿ ವಚನಗಳನ್ನು ಹೇಳಿದರೆಂಬುದು ನಮಗೆ ನಿರ್ದಿಷ್ಟವಾಗಿ ತಿಳಿದು ಬಂದಿಲ್ಲ. ಹರಿಹರ, ಸಿಂಗಿರಾಜ, ಕೆಂಚವೀರಣ್ಣೊಡೆಯ, ಚಾಮರಸ, ವಿರೂಪಾಕ್ಷ ಪಂಡಿತ ಮತ್ತಿತರು ತಮಗೆ ಸೂಕ್ತ ಕಂಡ ಸನ್ನಿವೇಶಗಳಲ್ಲಿ ವಚನಗಳನ್ನು ಉಪ ಯೋಗಿಸಿಕೊಂಡಿದ್ದಾರೆ. ಶ್ರೀ ಶ್ರೀನಿವಾಸಮೂರ್ತಿಗಳವರೂ, ಈ ಲೇಖಕನೂ ವಚನಗಳ ನಿಜ ಸಂದರ್ಭವನ್ನು ನಿರ್ಣಯಿಸುವ ಪ್ರಯತ್ನ ಮಾಡಿದ್ದಾರೆ. ಆದರೆ ಶ್ರೀಗಳವರು ಹೆಚ್ಚು ಸ್ವಾತಂತ್ರ್ಯವಹಿಸಿದ್ದಾರೆ. ನಾವು ಇತಿಹಾಸದ ಕಡೆಗೆ ಲಕ್ಷ್ಯಕೊಟ್ಟಿದ್ದರೆ ಶ್ರೀಗಳವರು ಭಾವನೆಯ ಕಡೆಗೆ ಲಕ್ಷ್ಯವಿತ್ತಿದ್ದಾರೆ. ಭಾವಿಕ ಬಸಣ್ಣನನ್ನರಿಯಲು ಭಾವನೆಯೇ ಉತ್ತಮ ಸಾಧನವೆಂಬುದು ನಿಜ ವಾದರೂ ಇತಿಹಾಸವನ್ನು ದುರ್ಲಕ್ಷಿಸಲು ಸಾಧ್ಯವಿಲ್ಲ. ಉಪಮೆಗಾಗಿ ಬಸವಣ್ಣ ಅಸ್ತ್ರ, ತಂಬೂರಿ, ಬೇಟೆ ಮೊದಲಾದ ಶಬ್ದಗಳನ್ನು ಉಪಯೋಗಿ ಸಿದ್ದರೆ ಅವುಗಳಿಗೆ ಯಥಾರ್ಥತೆಯನ್ನು ಕಲ್ಪಿಸಿ, ಎಲ್ಲವೂ ಬಸವಣ್ಣನ ವೈಯಕ್ತಿಕ ಅನುಭವದಿಂದ ಬಂದವು ಎಂಬ ಅಭಿಪ್ರಾಯವನ್ನು ಶ್ರೀಗಳವರು ವ್ಯಕ್ತಪಡಿಸಿದ್ದಾರೆ. ಬಸವಣ್ಣ ಅಸ್ತ್ರಭ್ಯಾಸ ಮಾಡಿದ್ದ, ವ್ಯಾಪಾರ ಮಾಡು ತ್ತಿದ್ದ, ಕೃಷೀವಲನಾಗಿದ್ದ, ಬೇಟೆಗಾರನಾಗಿದ್ದ, ಗಿಳಿ, ನವಿಲ, ಮರ್ಕಟ, ನಾಯಿ, ಕರಿ, ಕುರಿ, ಹಾವು, ಹಸು, ಹಯನಗಳ ಪ್ರಾಣಿಶಾಲೆಯಿಟ್ಟಿದ್ದ ಎಂದು ಹೇಳಹೊರಡುವುದು ಯುಕ್ತವೆಂದೆನಿಸುವುದಿಲ್ಲ. ಅತಿ ಎಳೆತದಿಂದಾಗಿ ಶ್ರೀಗಳವರ ಉಹೆಯ ರಬ್ಬರ್‌ದಾರ ಕೆಲವು ಕಡೆ ಹರಿದು ಹೋಗಿದೆ. ಈ ದೋಷ ಶ್ರೀಗಳವರ ಗ್ರಂಥದಲ್ಲಿ ನುಸುಳಿಕೊಂಡಿದ್ದರೂ ಅವರ ಗ್ರಂಥ ಜೀವನ ಚರಿತ್ರೆಗಳಲ್ಲಿ ಒಂದು ನೂತನ ಮಾರ್ಗವನ್ನು ಆವಿಷ್ಕಾರಮಾಡ ಹೊರಟಿದೆ. ಆಣಿಮುತ್ತುಗಳಂತಿರುವ ನೂರಾರು ಸುಂದರ ವಚನಗಳನ್ನಾಯ್ದು ಮಾಲೆ ಕಾರರಂತೆ ಶ್ರೀಗಳವರು ಅವುಗಳನ್ನು ಒಂದೆಡೆ ಪೋಣಿಸಲು ಹವಣಿಸಿದ್ದಾರೆ.

---

* ಅಣ್ಣನ ಬದುಕು : ಪುಟ ೨೭೦

ಅವರು ಕೃತಿ ಪೂರ್ಣ ಸಫಲತೆಯನ್ನು ಪಡೆದಿದೆಯೆಂದು ಹೇಳಲು ಸಾಧ ವಿಲ್ಲವಾದರೂ ಅದು ಒಂದು ಒಳ್ಳೆಯ ಪ್ರಯತ್ನವೆಂದು ಧಾರಾಳವಾಗಿ ಒಪ್ಪಿಕೊಳ್ಳಬೇಕು.

---

# ೪. ಆಯ್ದಕ್ಕಿ ಮಾರಯ್ಯ

ಶ್ರೀ ಶ್ರೀಗಳವರು ಬಸವಣ್ಣನವರ ಸಮಕಾಲೀನವಾದ ಶಿವಶರಣ 'ಆಯ್ದಕ್ಕಿ ಮಾರಯ್ಯ'ನ ಜೀವಿತವನ್ನು ನಾಟಕ ರೂಪವಾಗಿ ರಚಿಸಿದ್ದಾರೆ. ಪ್ರಭುದೇವರು, ಬಸವಣ್ಣನವರು ಇವರ ವಚನಗಳಲ್ಲಿ ಸಿಕ್ಕುವ ಸೂಚನೆಗಳನ್ನುಳಿದು ಮಾರಯ್ಯನ ಬಗ್ಗೆ ಹೆಚ್ಚು ವಿಷಯಗಳು ತಿಳಿದುಬಂದಿಲ್ಲ. ಸಿಂಗಿರಾಜ ಪುರಾಣಕಾರನಾಗಲಿ ಬಸವಪುರಾಣ ಕರ್ತೃವಾಗಲಿ ಪ್ರಭುಲಿಂಗ ಲೀಲೆಯ ಕರ್ತೃವಾಗಲಿ, ವೃಷಭೇಂದ್ರ ವಿಜಯಕಾರನೇ ಆಗಲಿ ಮಾರಯ್ಯನ ವಿಚಾರ ಪ್ರಸ್ತಾಪಿಸಿಲ್ಲ. ಹರಿಹರನು ಮಾರಯ್ಯನ ಮೇಲೆ ಒಂದು ರಗಳೆಯನ್ನು ಬರೆದಿದ್ದಾನೆಯೋ ಇಲ್ಲವೋ ತಿಳಿದುಬಂದಿಲ್ಲ. ಇದಕ್ಕೆ ಒಂದು ಕಾರಣವನ್ನು ಊಹಿಸಬಹುದು. ವೀರಶೈವ ಕವಿಗಳು ಇಂಗ್ಲಿಷ್ ಕವಿಗಳಂತೆ ಪ್ರಧಾನ—ಗೌಣ ಪುರುಷರೆಂದು ಕಲ್ಪನೆಮಾಡಿಕೊಂಡು, ಮಾರಯ್ಯನನ್ನು ಗೌಣವರ್ಗಕ್ಕೆ ಸೇರಿಸಿರಬಹುದೇ ? ಶಿವಶರಣರಲ್ಲಿ ಹಿರಿದು ಕಿರಿದು, ಮೇಲು ಕೀಳು, ಪ್ರಧಾನ ಗೌಣವೆಂದು ವಿಭಾಗಮಾಡುವ ಪದ್ಧತಿ ಇಲ್ಲ. ೧೫ನೆಯ ಶತಮಾನಕ್ಕೆ ಸೇರಿದ ಗೂಳೂರು ಸಿದ್ಧವೀರಣಾಚಾರ್ಯನು ತನ್ನ 'ಶೂನ್ಯ ಸಂಪಾದನೆ'ಯಲ್ಲಿ ಮಾರಯ್ಯನ ಬಗ್ಗೆ ಇಷ್ಟು ವಿಶೇಷವಾಗಿ ಪ್ರಸ್ತಾಪಿಸಬೇಕಾದರೆ ಅವನಿಗೆ ಆಧಾರ ಯಾವುದು ? ಅವನು ವಿಷಯಗಳನ್ನು ಎಲ್ಲಿಂದ ಸಂಗ್ರಹಿಸಿದ ? ಎಂಬುದು ವಿಚಾರಯೋಗ್ಯವಾಗಿವೆ.

ಮಾರಯ್ಯ ಐತಿಹಾಸಿಕ ವ್ಯಕ್ತಿ. ಹಾಗೂ ಬಸವಣ್ಣನವರ ಸಮಕಾಲೀನನು. ಇದೇ ಹೆಸರಿನ ಕಟ್ಟಿಗೆ ಕಾಯಕ ಮಾಡುತ್ತಿದ್ದ ಮೋಳಿಗೆ ಮಾರಯ್ಯನೆಂಬ ಇನ್ನೊಬ್ಬ ಶಿವಶರಣ ಇದ್ದಹಾಗೆ ತಿಳಿದುಬಂದಿದೆ. ಆದರೆ ಅವನಿಗೂ ಇವನಿಗೂ ಯಾವ ಸಂಬಂಧವೂ ಇಲ್ಲ. ಕವಿ ಚರಿತೆಕಾರರು ಆಯ್ದಕ್ಕಿ ಮಾರಯ್ಯ ಕ್ರಿ. ಶ. ೧೧೬೦ರಲ್ಲಿ ಇದ್ದನೆಂದೂ ಕೆಲ ವಚನಗಳನ್ನು ಬರೆದಿದ್ದಾನೆಂದೂ ಹೇಳಿದ್ದಾರೆ. ಶೂನ್ಯ ಸಂಪಾದನೆಯಲ್ಲಿ ನಮಗೆ ಸಿಕ್ಕುವುದು ಕೆಲ ವಚನಗಳು ಮಾತ್ರ. ಮಾರಯ್ಯ 'ಅಮರೇಶ್ವರಲಿಂಗ' ಎಂಬ ಅಂಕಿತ

ದಿಂದಲೂ ಅವನ ಪುಣ್ಯಾಂಗನೆ ಲಕ್ಕಮ್ಮ 'ಮಾರಯ್ಯ ಪ್ರಿಯ ಅಮರೇಶ್ವರ ಲಿಂಗ' ಎಂಬ ಅಂಕಿತದಿಂದಲೂ ವಚನಗಳನ್ನು ನುಡಿದಿರುವುದಾಗಿ ತಿಳಿದು ಬಂದಿದೆ. ಶೂನ್ಯ ಸಂಪಾದನೆಯ ಇತರ ಗ್ರಂಥಗಳು ಬೆಳಕಿಗೆ ಬಂದರೆ ಮಾರಯ್ಯನ ಹೆಚ್ಚು ವಚನಗಳೂ ಅವನ ಬಗ್ಗೆ ಹೆಚ್ಚು ವಿಚಾರಗಳೂ ತಿಳಿದು ಬರಬಹುದು.

ಶೂನ್ಯ ಸಂಪಾದನಾಕಾರನು ಆಯ್ದಕ್ಕಿ ಮಾರಯ್ಯನ ಸಂಪಾದನೆ ಯನ್ನು ಹೀಗೆ ನಿರೂಪಿಸಿದ್ದಾನೆ.

"ಒಂದು ದಿನ ಪ್ರಭುದೇವರು, ಬಸವರಾಜದೇವರು, ಮಡಿವಾಳ ಮಾಚಿತಂದೆಗಳೂ, ಸಿದ್ಧರಾಮಯ್ಯ ದೇವರು, ಸೊಡ್ಡಳ ಬಾಚರಸರು, ಹಡಪದಪ್ಪಣ್ಣಗಳು ಮೊದಲಾದ ಎಲ್ಲಾ ಶಿವಾನುಭವಿಗಳೂ ಅನುಭವ ಗೋಷ್ಠಿಯಲ್ಲಿದ್ದಾಗ ಆಯ್ದಕ್ಕಿ ಮಾರಯ್ಯನು ಬಂದು ಕಾಯಕದ ಮಹತ್ವ ವನ್ನು ಸಾರುತ್ತಾನೆ. ಗುರುಲಿಂಗ ಜಂಗಮದ ದಾಸೋಹಮಾಡುವುದಕ್ಕೆ ಹೊನ್ನು, ಹೆಣ್ಣು, ಮಣ್ಣು ಇವೇ ಮೂಲವೆಂಬುದೇ ಅವನ ವಾದಸರಣಿ ಯಾಗಿತ್ತು. ಆದಕ್ಕೆ ಪ್ರಭುದೇವರು ಕೇವಲ ಕಾಯಕದಲ್ಲಿ ಮೈಮರೆಯು ವುದು ಆಗಸ ನೀರಡಸಿ ಸಿಂದಂತೆ ಆಗುತ್ತದೆಂದೂ ಮಾಡುವ ಮಾಟದಿಂದಲೇ ಬೇರೊಂದನ್ನರಿಯಬೇಕು; ಅರುವಿಂಗೆ ನೆಮ್ಮಗೆ ಒಡಗೂಡಬೇಕು, ಅರುವಿಂಗೆ ನೆಮ್ಮಗೆ ಕೂಡಿದ ಬಳಿಕ ಬಯಲ ಭ್ರಮೆಯು ಕಳೆದು ಗುಹೇಶ್ವರ ಲಿಂಗದಲ್ಲಿ ನಿಜಪದವನ್ನೈದುವುದು ಎಂದು ಮಾರಯ್ಯನನ್ನು ತ್ರಿವಿಧ ದಾಸೋ ಹದ ಕಡೆಗೆ ತಿರುಗಿಸುತ್ತಾರೆ. ಅಂದಿನಿಂದ ಮಾರಯ್ಯ ತನ್ನ ನಿತ್ಯ ಕಾಯಕ ವಾದ ಆಯ್ದಕ್ಕಿಯಿಂದ ಒಬ್ಬೊಬ್ಬ ಜಂಗಮನ ಸೇವೆಯನ್ನು ಮಾಡುತ್ತಿರು ತ್ತಾನೆ. ಒಂದು ದಿನ ಮಾರಯ್ಯ ಆಸೆಗೆ ಪಕ್ಕಾಗಿ ನಿತ್ಯಕ್ಕಿಂತ ಹೆಚ್ಚಾಗಿ ಅಕ್ಕಿಯನ್ನು ಬಸವರಾಜದೇವರ ಮನೆಯಂಗಳದಿಂದ ಆಯ್ದು ತರಲು ಲಕ್ಕಮ್ಮ

"ಆಸೆ ಎಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ?
ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ?

ಈಸಕ್ಕಿಯ ಆಸೆ ನಮಗೇಕೆ? ಈಶ್ವರನೊಪ್ಪ—
ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನವುಂಟೆ?
ಬೆಟ್ಟ ಬಲ್ಲಿತ್ತೆಂದರೆ ಉಳಿಯ ಕೊನೆಯಲ್ಲಿ ಬಡತನ
ಉಳ್ಳರೆ ಒಡೆಯದೆ!
ಘನ ಶಿವಭಕ್ತರಿಗೆ ಬಡತನವಿಲ್ಲ. ಸತ್ಯರಿಗೆ ದುಃಕರ್ಮವಿಲ್ಲ
ಎನಗೆ ಮಾರಯ್ಯ ಪ್ರಿಯ ಅಮರೇಶ್ವರ ಲಿಂಗವುಳ್ಳನ್ನಕ್ಕರ
ಯಾರ ಹಂಗಿಲ್ಲ ಮಾರಯ್ಯ."

ಎಂದು ಬುದ್ಧಿ ಹೇಳಿ 'ಭಾವಶುದ್ಧವಿಲ್ಲದ ಭಕ್ತಿ ಹೋಯಿತು' ಎಂದು ಖಂಡಿತವಾಗಿ ನುಡಿಯುತ್ತಾಳೆ. ಅವಳ ದೃಷ್ಟಿಯಲ್ಲಿ

'ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು
ನಡೆಯಿಲ್ಲದ ನುಡಿ ಅರುವಿಂಗೆ ಹಾನಿ
ಕೊಡದೆ ತ್ಯಾಗಿ ಎನಿಸಿಕೊಂಬುದು ಮುಡಿ ಇಲ್ಲದ ಶೃಂಗಾರ
ದೃಢವಿಲ್ಲದ ಭಕ್ತಿ ಅಡಿಒಡೆದ ಕುಂಭದಲ್ಲಿ ಸುಖ
ಜಲವ ತುಂಬಿದಂತೆ
ಮಾರಯ್ಯ ಪ್ರಿಯ ಅಮರೇಶ್ವರ ಲಿಂಗ ಮುಟ್ಟದ ಭಕ್ತಿ''

ಎಂದು ಹೆಚ್ಚಾಗಿ ತಂದಿದ್ದ ಬೋನವ ಅಲ್ಲೇ ಸುರಿದು ಬನ್ನಿ ಎಂದು ಹೇಳುತ್ತಾಳೆ. ಸಕಾಮಮಯವಾದ ತನ್ನ ಪತಿಯ ಭಕ್ತಿಯನ್ನು ಲಕ್ಕಮ್ಮ

"ಮಾಡುವ ಮಾಟವುಳ್ಳನಕ್ಕ ಬೇರೊಂದು ಪದವನರಸಲೇತಕ್ಕೆ?
ದಾಸೋಹವೆಂಬ ಸೇವೆಯು ಬಿಟ್ಟು ನಿರಿಸಲಾರದೆ ಕೈಲಾಸ
ವೆಂಬ ಆಸೆ ಬೇಡ.
ಮಾರಯ್ಯ ಪ್ರಿಯ ಅಮರೇಶ್ವರ ಲಿಂಗವಿದ್ದ ಠಾವೆ ಕೈಲಾಸ''
"ಮಾಡಿ ನೀಡಿ ಹೋದಿಹನೆಂಬಾಗಲೆ ಕೈಲಾಸವೇನು ಕೈಕೂಲಿಯೆ?
ಮುಂದೊಂದ ಕಲ್ಪಿಸದೆ ಹಿಂದೊಂದ ಭಾವಿಸದೆ, ಸಲೆ ಸಂದಿದ್ದಾಗಲೆ
ಮಾರಯ್ಯ ಪ್ರಿಯ ಅಮರೇಶ್ವರ ಲಿಂಗವಿದ್ದ ಠಾವೆ ಕೈಲಾಸ.''

ಎಂದು ಋಜು ಮಾರ್ಗದ ಕಡೆಗೆ ಪತಿಯ ಚಿತ್ತವನ್ನು ತಿರುಗಿಸುತ್ತಾಳೆ. ಲಕ್ಕಮ್ಮನ ಆಧ್ಯಾತ್ಮಿಕ ಉತ್ಕ್ರಾಂತಿಯ ಮಹತಿಯು ಮಾರಯ್ಯನಿಗೆ ವೇದ್ಯವಾಗುತ್ತದೆ. ಸತಿಪತಿಯೆಂಬ ಉಭಯ ಪ್ರಾಣ ಏಕರೂಪವಾಗುವ ಹದನೇ

ನೆಂದು ಲಕ್ಕಮ್ಮನನ್ನು ಬೆಸಗೊಳ್ಳುತ್ತಾನೆ. ಇದಕ್ಕೆ 'ಅಹಂಕಾರಗುಣವಳಿದು, ತ್ರಿವಿದ ದಾಸೋಹವೇ ಮಹಾಘನಲಿಂಗೈಕ್ಯ'ವೆಂದು ಆಕೆ ತಿಳಿಯಹೇಳು ತ್ತಾಳೆ. ಸತಿಯ ಮಹಿಮೆ, ತಿಳಿವು, ಚಿತ್ತಶುದ್ಧಿಗೆ ಬೆರಗಾದ ಮಾರಯ್ಯನು ಆಕೆಯ ಇಚ್ಛೆಯಂತೆ ಲಕ್ಷದ ಮೇಲೆ ತೊಂಬತ್ತಾರುಸಾವಿರ ಗಣಂಗಳಿಗೆ ನೈವೇದ್ಯಕ್ಕೆ ಬರಹೇಳಿ ಬರುತ್ತಾನೆ. ತಾನು ಅಲ್ಪ, ಗಣಂಗಳು ಮಹನೀಯರು, ಅಸಂಖ್ಯಾತರು; ತಾನು ನಿರ್ಧನಿಕ, ಅಶಕ್ತ ಅವರನ್ನು ತೃಪ್ತಿಪಡಿಸುವುದು ಶಕ್ಯವೇ ಎಂದು ಅನುಮಾನಗ್ರಸ್ತನಾದ ಪತಿಗೆ ಲಕ್ಕಮ್ಮ,

"ಮನಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಲ್ಲದೆ ಚಿತ್ತ
ಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ
ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು, ಮಾರಯ್ಯ ಪ್ರಿಯ
ಅಮರೇಶ್ವರ ಲಿಂಗದ ಸೇವೆಯುಳ್ಳನಕ್ಕ."

ಎಂದು ಧೈರ್ಯ ಹೇಳುತ್ತಾಳೆ. ಲಕ್ಕಮ್ಮನ ನೈಷ್ಠಿಕ ಭಕ್ತಿಯಿಂದ ಎಲ್ಲರಿಗೂ ತೃಪ್ತಿಯಾಗಿ ಆರೋಗಣೆಯಾಗುತ್ತದೆ. ಇವನ್ನು ಕಂಡು ಆಶ್ಚರ್ಯ ಪಟ್ಟು ಪ್ರಭುದೇವರಿಗೆ ಬಸವಣ್ಣನವರು 'ನಿಮ್ಮ ಶರಣರು ಬಡವರಲ್ಲ, ಘನ ಮಹಿಮರು' ಎಂದು ಸಮಾಧಾನ ಹೇಳುತ್ತಾರೆ. ಅತ್ಯಂತ ವಿನಯಪರನಾದ ಮಾರಯ್ಯ ತನ್ನ ಅಲ್ಪತನ, ದಾರಿದ್ರ್ಯವನ್ನುಸುರಿಕೊಂಡಾಗ ಬಸವರಾಜ ದೇವರು

"ಹಮ್ಮು ಬಿಮ್ಮುವಳಿದ ಅನುವರಿತ ಶಿವನೀನು
ಎನ್ನ ಕರಸ್ಥಳದ ಕಳೆ ನೀನು
ಎನ್ನ ಮನೋಮಧ್ಯದ ಸ್ವಯಂಜ್ಯೋತಿ ನೀನು
ಅಮರೇಶ್ವರ ಲಿಂಗದ ಅನುವಿನ ಕಳೆಯೇನು."

ಎಂದು ಮಾರಯ್ಯನ ಘನಭಕ್ತಿಯನ್ನು ಲೋಕಕ್ಕೆ ಪ್ರಕಟಿಸುತ್ತಾರೆ. ಆಗ ಚಂದ್ರಕಾಂತದ ಶಿಲೆಯಲ್ಲಿ ಬಿಂದು ಅಡಗಿದಂತೆ, ಗೋವುಗಳಲ್ಲಿ ಗೋರೋಜನ ರಂಜಿಸುವಂತೆ, ಶಿಲೆಕಾಷ್ಟಗಳಲ್ಲಿ ಅನಲ ಅಡಗಿಪ್ಪಂತೆ, ಸತ್ಯದ ಹೃದಯದ ಮೌಕ್ತಿಕದ ಉದುಕದಂತೆ, ಆಯ್ದಕ್ಕಿ ಮಾರಯ್ಯ ತನ್ನ ಲಿಂಗದಲ್ಲಿ ಐಕ್ಯ ನಾಗುತ್ತಾನೆ. ಅವನ ಸತಿ ಪತಿಯೊಡನೆ ಭಾವದ ಭ್ರಮೆಯಡಗಿ, ಜೀವ ವಿಕಾರನಿಂದು, ಮಾಡುವಮಾಟ ಸಮಯದಿಂದ ಲಿಂಗೈಕ್ಯವಾಗುತ್ತಾಳೆ.

ಇದರಲ್ಲಿ ನಮ್ಮ ಚಿತ್ತವನ್ನು ಮುತ್ತುವ ಮಹಾವ್ಯಕ್ತಿ ಲಕ್ಕಮ್ಮ. ಪತ್ನಿ ತಕ್ಕ ಸತಿಯಾಗಿ, ಗುರುವಾಗಿ ಕೊನೆಗೆ ಅವನ ಭಾಗದ ದೈವವೇ ಆಗುತ್ತಾಳೆ. ಕರ್ಮಜಾಲದಿಂದ ಅವನ ಮನಸ್ಸನ್ನು ಭಕ್ತಿಯ ಕಡೆಗೆ ತಿರುಗಿಸಿ ಕರ್ಮಕ್ಕೆ ದಾಸೋಹಂಭಾವದ ಸುವರ್ಣಪುಟವನ್ನು ಕೊಡುತ್ತಾಳೆ. ಅವಳ ನಿಷ್ಠೆ, ಭಕ್ತಿ, ನಿಷ್ಕಾಮ, ಆತ್ಮಧೈರ್ಯ ಅವಳನ್ನು ಮಹಾಸತಿಯರ ಪಂಕ್ತಿಗೆ ಸೇರಿ ಸುತ್ತವೆ.

ಶ್ರೀ ಶ್ರೀಗಳವರು ಈ ಕಥಾಸರಣಿಯನ್ನೇ ಬಹುಮಟ್ಟಿಗೆ ಅನುಸರಿ ದ್ದರೂ ನಾಟಕೋಚಿತವಾದ ಕೆಲವು ಯುಕ್ತಮಾರ್ಪಾಟುಗಳನ್ನು ಮಾಡಿ ಕೊಂಡಿದ್ದಾರೆ. ಕಾಯಕ ಪ್ರಿಯನಾದ ಮಾರಯ್ಯನ ಬಾಯಲ್ಲಿ ಭಕ್ತ ಜಂಗಮರ ಭರ್ತ್ಸನೆಯು ಸಯುಕ್ತಿಕವಾಗಿ ಬಂದಿದೆ. ಅನುಭವ ಮಂಟಪದಲ್ಲಿ ಬಸವಣ್ಣನವರಿಗೂ ಮಾರಯ್ಯನಿಗೂ ಆಗುವ ಸಂಭಾಷಣೆ ಬಸವಣ್ಣನವ ನ್ಯಾಯನಿಷ್ಠುರತೆಯನ್ನೂ ಮಾರಯ್ಯನ ಅಜ್ಞಾನದೆಸೆಯನ್ನೂ ಸಾರುತ್ತದೆ. ಲಕ್ಷ ಎಂಭತ್ತಾರು ಸಾವಿರ ಗಣಂಗಳ ಆರೋಗಣೆಯನ್ನು ಒಪ್ಪಿಕೊಂಡಾಗ ಏನಾಯ್ತು ಎಂಬುದು ಶೂನ್ಯ ಸಂಪಾದನೆಯಿಂದ ತಿಳಿದುಬಂದಿಲ್ಲ. ಅದಕ್ಕೆ ಶ್ರೀಶ್ರೀಗಳವರು ತನ್ನ ಅನುರೇಶ್ವರ ಲಿಂಗದ ತವರಾದ ಬಸವಣ್ಣನವರ ಮನೆ ಯಿಂದ ಎಲ್ಲ ಸಾಮಾನುಗಳನ್ನೂ ಲಕ್ಕಮ್ಮ ತರಿಸಿದಳೆಂದು ಮಾರ್ಪಡಿ ಸಿರುವುದು ಸಮಂಜಸವೂ ಗಂಭೀರವೂ ಆಗಿದೆ. ಕೊನೆಯಲ್ಲಿ ಮಾರಯ್ಯ ಮೊದಲು ಶಿವಸಾಯುಜ್ಯವನ್ನು ಪಡೆದನೆಂದು ಶೂನ್ಯಸಂಪಾದನೆಕಾರನು ಹೇಳಿದ್ದಾನೆ. ಇದು ಲಕ್ಕಮ್ಮನಿಗೆ ಸ್ವಲ್ಪ ಅನ್ಯಾಯ ಮಾಡಿದಂತಾಗುತ್ತದೆ. ಅವಳಿಂದ ಜ್ಞಾನಜ್ಯೋತಿಯನ್ನು ಪಡೆದ ಮಾರಯ್ಯನ ಸರದಿ ಎರಡನೆಯದೇ ವಿನಾ ಮೊದಲನೆಯದಲ್ಲ; ಪತಿ ಬದುಕಿರುವಾಗ ಸತಿ ಶಿವೈಕ್ಯವಾಗುವುದು ಲೇಸು, ಶೋಭಯಮಾನ. ಈ ದೃಷ್ಟಿಯಿಂದ ಶ್ರೀ ಶ್ರೀಗಳವರು ನಾಟಕಕ್ಕೆ ಕೊಟ್ಟಿರುವ ಮುಕ್ತಾಯ ಮಹತ್ವದ್ದಾಗಿರುತ್ತದೆ.

---

## ೫. ಮಹಾದೇವಿಯಮ್ಮ

೧೧-೧೨ನೆಯ ಶತಮಾನಗಳಲ್ಲಿ ಕಾಶ್ಮೀರಕ್ಕೂ ಕರ್ನಾಟಕಕ್ಕೂ ನಿಕಟ ಸಂಬಂಧವಿತ್ತು. ವಿದ್ಯಾಕೇಂದ್ರವಾಗಿದ್ದ ಕಾಶ್ಮೀರಕ್ಕೆ ಕರ್ನಾಟಕದಿಂದ ಅನೇಕ ವಿದ್ವಾಂಸರು ಹೋಗಿ ಬರುತ್ತಿದ್ದರು; ಕಾಶ್ಮೀರದಿಂದಲೂ ಜನ ಬಂದು ಹೋಗುತ್ತಿದ್ದರು. ಕಾಶ್ಮೀರ ದೇಶದ ಮಾಂಡವ್ಯಪುರದ ರಾಜನಾದ ಮಹಾದೇವರಾಜನಿಗೆ ವಿರಕ್ತಿ ಹುಟ್ಟಿ, ಅವನು ರಾಜ್ಯಕೋಶಗಳನ್ನು ಬಿಟ್ಟು, ತನ್ನ ಹೆಂಡತಿ ಗಂಗಾದೇವಿ ಮತ್ತು ಸೋದರಿ ನಿಜದೇವಿಯರೊಡನೆ ಬಂದು ಕಲ್ಯಾಣದಲ್ಲಿ ನಿಂತು ಕಟ್ಟಿಗೆ ಕಾಯಕವನ್ನು ಕೈಗೊಳ್ಳುತ್ತಾನೆ. ಕಲ್ಯಾಣಕ್ಕೆ ಬಂದ ಮೇಲೆ ಮಹಾದೇವರಾಜನ ಹೆಸರು ಮೋಳಿಗೆ ಮಾರಯ್ಯನೆಂದೂ, ಅವನ ಸೋದರಿಯ ಹೆಸರು ಬೊಂತಾದೇವಿಯೆಂದೂ ಮಾರ್ಪಾಟಾಗುತ್ತದೆ.

ಮಾರಯ್ಯ, ಮಹಾದೇವಿಯಮ್ಮ, ಬೊಂತಾದೇವಿ 'ಅನುಭವ ಮಂಟಪ'ದಲ್ಲಿ ಪ್ರಭಾವಶಾಲಿ ವ್ಯಕ್ತಿಗಳಾಗಿದ್ದರು. ಮಾರಯ್ಯ 'ನಿಷ್ಕಳಂಕ ಮಲ್ಲಿಕಾರ್ಜುನ' ಎಂಬ ಅಂಕಿತದಲ್ಲಿಯೂ ಮಹಾದೇವಿಯಮ್ಮ 'ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ' ಎಂಬ ಅಂಕಿತದಲ್ಲಿಯೂ ವಚನಗಳನ್ನು ರಚಿಸಿದ್ದಾರೆ.

ಒಂದೆಡೆಯಲ್ಲಿ ಉಪಲಬ್ಧವಿಲ್ಲದ ಮಹಾದೇವಿಯಮ್ಮನ ಅರವತ್ತೆರಡು ವಚನಗಳನ್ನು ಶ್ರೀ ನಿಡುಮಾಮುಡಿ ಶ್ರೀಗಳವರು 'ಶೂನ್ಯ ಸಂಪಾದನೆ'ಯಿಂದ ಸಂಗ್ರಹಿಸಿ ಪ್ರಕಟಿಸಿದ್ದಾರೆ. ಮಹಾದೇವಿಯಕ್ಕನಿಗೆ ಮಹಾದೇವಿಯಮ್ಮನನ್ನು ಹೋಲಿಸುತ್ತಾ ಶ್ರೀಗಳವರು

"ಶರಣೆಯರಲ್ಲಿ ಮಹಾದೇವಿಯಮ್ಮನಿಗಿರುವ ಘನತೆ-ಗೌರವಗಳು ಮಹಾದೇವಿಯಕ್ಕಗಳಿಗಿಂತಲೂ ಕಡಿಮೆಯವಲ್ಲ. ಒಂದು ದೃಷ್ಟಿಯಿಂದ ಇನ್ನೂ ಮಿಗಿಲೆಂದರೂ ಸಲ್ಲುವುದು. ಏಕೆಂದರೆ ಉಡುತಡಿಯ ಅಕ್ಕನು ಸ್ವತಃ ಅರಸುಮನೆತನದವಳಲ್ಲ. ಆ ಅರಸತ್ತಿಗೆಯ ಸುಖವನ್ನು ಉಂಡವಳೂ

ಅಲ್ಲ. ಮೇಲಾಗಿ ಅರಸಿ ಬಂದ ಅರಸನನ್ನು ಪರಿಹರಿಸಿ ಬಂದವಳ್ಳ ಕಾಶ್ಮೀರದ ಮಹಾದೇವಿಯಮ್ಮನಾದರೂ ಸ್ವತಃ ಅರಸಿ. ಅರಮನೆಯ ಹಲವಾರು ಸುಖಗಳನ್ನು ಅರಸನೊಡನೆ ಉಂಡುಟ್ಟು ಬಾಳಿದವಳು. ಆ ಅನು ಭವಿಸುತ್ತಿರುವ ರಾಜಸುಖಗಳನ್ನು ಒಮ್ಮಿಗೆ ಒಮ್ಮನದಿಂದ ತಳ್ಳಿತೂರಿ ವಿರ ಯಾದವಳು. ಹೀಗಾಗುವುದು ಸರ್ವಸಾಧಾರಣವಾದ ಮಾತಲ್ಲ. ಅನು ಭವಿಸದಿರುವ ಸುಖಸೌಲಭ್ಯಗಳನ್ನು ಬಿಡಬಹುದು. ಅನುದಿನವೂ ಅನು ಭವಿಸುತ್ತಿರುವದನ್ನು ಬಿಟ್ಟುಬಿಡುವುದು ತೀರ ಕಷ್ಟಸಾಧ್ಯವಾದ ಮಾತು. ಈ ಕಾರ್ಯದಿಂದ ಮಹಾದೇವಿಯಮ್ಮನಿಗೆ—ಮಹಾದೇವಿಯಕ್ಕನಿಗಿಂತಲು ವಿರತಿಯೊಂದರಲ್ಲಿ ಮಾತ್ರ ಕೊಂಚ ಉನ್ನತಸ್ಥಾನವಿದೆಯೆಂದು ಹೇಳಿದ ಏನೂ ತಪ್ಪಾಗಲಿಕ್ಕಿಲ್ಲ, ಅಥವಾ ಇಬ್ಬರೂ ಮಹಾದೇವಿಯರೆ. ಆದ ಒಬ್ಬಳು ಅಕ್ಕ, ಇವಳು ಅಮ್ಮ ಇಷ್ಟೆ.'' †

ಮಹಾದೇವಿಯಕ್ಕ ರಾಜ್ಯಭೋಗಗಳನ್ನು ಅನುಭವಿಸಿದ್ದಳೇ ಇಲ್ಲವೆ ಎನ್ನುವ ವಿಷಯವನ್ನು ನಾನು ಹಿಂದಿನ ಅಧ್ಯಾಯವೊಂದರಲ್ಲಿ ಪ್ರಸ್ತಾಪಿಸಿ ದ್ದೇನೆ. ಆದರೆ ಶ್ರೀಗಳವರ ಪ್ರಸ್ಥಾನವನ್ನೇ ಒಪ್ಪಿಕೊಂಡರೂ ಮಹಾದೇವಿ ಯಕ್ಕನ ವಿರತಿ ಯಾರಿಗೂ ಕಡಿಮೆಯಾದುದಲ್ಲ. ರಾಜಮನೆತನದಲ್ಲಿ ಹುಟ್ಟಿ ರಾಜನ ಕೈಹಿಡಿದ ಮಹಾದೇವಿಯ್ಮನಿಗೆ ಆ ಸುಖದ ನಿಬ್ಬರವಾಗಿ ವಿರಕ್ತಿ ಹುಟ್ಟಿರಲೂ ಬಹುದು. ಆದರೆ ಹೊಸದಾಗಿ ಪ್ರಾಪ್ತವಾದ ರಾಜ್ಯಭೋಗ ವನ್ನು ತ್ಯಜಿಸುವುದು ಸಾಧಾರಣ ವಿಷಯವಲ್ಲ.

ಮಹಾದೇವಿಯಮ್ಮನ ವಚನಗಳಲ್ಲಿ ಅನುಭಾವಕ್ಕಿಂತ ಪಾಂಡಿತ್ಯ ಪಾರಿಭಾಷಾಪ್ರೇಮ ಕಂಡುಬರುತ್ತದೆ. ಮಹಾದೇವಿಯಕ್ಕನ ಮಾತುಗಳು ಮನಮುಟ್ಟುವಂತೆ ಮಹಾದೇವಿಯಮ್ಮನ ಮಾತುಗಳು ಮನಮುಟ್ಟುವುದಿಲ್ಲ ಆದರೆ ಮಹಾದೇವಿಯಮ್ಮನೂ ವೀರವಿರತೆಯಾಗಿ, ಅನುಭವಮಂಟಪದಲ್ಲಿ ಶರಣೆಯರಲ್ಲಿ ಗಣ್ಯಗಳಾಗಿದ್ದಳೆಂಬುದರಲ್ಲಿ ಸಂದೇಹವಿಲ್ಲ.

---

† ಶ್ರೀ ಮಹಾದೇವಿಯಮ್ಮನ ವಚನಗಳು: ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರಸ್ವಾಮಿಗಳು,—ಮುನ್ನುಡಿಯಲ್ಲಿ.

“ಕಪಟಕ್ಕೆ ಒಳಗುಹೊರಗಲ್ಲದೆ ಸ್ವಯಂಭು ಪ್ರೇಮಕ್ಕುಂಟೆ
ಒಳಹೊರಗು ?
ಕುಟಿಲದಿಂದ ಘಟವಹೊರವಂಗೆ ಪ್ರಕಟ ಪೂಜೆಯಲ್ಲದೆ
ಅಘಟಿತಂಗುಂಟೆ ಅಖಿಳರ ಮೆಚ್ಚಿನ ಪೂಜೆ ?
ತೃಣದ ತುದಿಯ ಬಿಂದುವಾದಡು ತ್ರಿಕರಣಶುದ್ಧವಾಗಿ
ತ್ರಿಗುಣಾತ್ಮನ ಏಕವಮಾಡಿ, ತ್ರಿಶಕ್ತಿಯ ಇಚ್ಛೆಯ ಮುಚ್ಚಿ,
ನಿಶ್ಚಯದಿಂದ ಮಾಡಿ ಮಾಡದಿರ್ದಡು ಮುಟ್ಟದಲ್ಲಿ
ತೊಟ್ಟು ಬಿಟ್ಟ ಹಣ್ಣಿನಂತಿರಬೇಕು
ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು
ಉಭಯ ಲೇಪವಾದ ಕಾರಣ.”

“ಪೂಜಿಸಿ ಕಂಡಿಹೆನೆಂದಡೆ ಪೂಜೆಗೆ ತನ್ಮಯಮೂರ್ತಿ ನೀನು
ನೆನಹಿನಲ್ಲಿ ಅನುಕರಿಸಿ ಕಂಡಿಹೆನೆಂದಡೆ ಆ ನೆನಹಿಂಗೆ
ಆತ್ಮಸ್ವರೂಪ ನೀನು.
ಎಲ್ಲಾ ಕಡೆಯಲ್ಲಿ ಭಿನ್ನವಮಾಡಿ ಕಂಡಿಹೆನೆಂದಡೆ ಅಣೋರಣೀಯಾ
ಮಹಿತೋ ಮಹೀಯ ನೀನು, ಸತ್ಯವೆಲ್ಲಿದ್ದಿತು ಅಲ್ಲಿ ತಪ್ಪದಿಪ್ಪೆ.
ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು
ನಿಶ್ವಾಸವೆಲ್ಲಿಪ್ಪುದು ಅಲ್ಲಿ ತಪ್ಪದಿಪ್ಪನು.”

“ಮಣ್ಣನಿತ್ತು ನಿನ್ನ ಕಂಡಿಹೆನೆಂದಡೆ, ಜಗಭರಿತ ನೀನು,
ಹೊನ್ನನಿತ್ತು ನಿನ್ನ ಕಂಡಿಹೆನೆಂದಡೆ ಹಿರಣ್ಯಮೂರ್ತಿ ನೀನು,
ಹೆಣ್ಣಕೊಟ್ಟು ನಿನ್ನ ಕಂಡಿಹೆನೆಂದಡೆ ತ್ರಿವಿಧಶಕ್ತಿಮೂರ್ತಿ ನೀನು,
ಮನವನಿತ್ತು ನಿನ್ನ ಕಂಡಿಹೆನೆಂದೆಡೆ ಮನೋಮೂರ್ತಿ ನೀನು,
ಎನಗೇನು ನಿನಗಿತ್ತ ಕಾಂಬಕಾಣಿಕೆ ?
ನೀನು ಸಿಕ್ಕುವದಕ್ಕೆ ಕ್ರೀಯಲ್ಲಿನಿರತ, ಸದ್ಭಾವದಲ್ಲಿ ಶುದ್ಧ
ಹಿಡಿದುದಬಿಡದೆ, ಬಿಟ್ಟುದ ಹಿಡಿಯದೆ,
ನಿಶ್ಚಯರಾದ ನಿಜಜ್ಞಾನಿಗಳಲ್ಲಿ ಬೆಚ್ಚಂತಿದ್ದರೆ ನೀನು ಅಲ್ಲಿ
ತಪ್ಪದಿಪ್ಪೆ.
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ.”

“ಕೈಯಲ್ಲಿ ಜ್ಯೋತಿಯಹಿಡಿದು ಕತ್ತಲೆ ಎನಲೇತಕ್ಕೆ ?
ಪರುಷರಸ ಕೈಯಲ್ಲಿದ್ದು ಕೂಲಿಯ ಮಾಡಲೇತಕ್ಕೆ ?

ಕ್ಷುತ್ತು ನಿವೃತ್ತಿಯಾದವಂಗೆ ಕಟ್ಟೋಗರದ ಹೊರೆಯಹೊರಲೇತಕ್ಕೆ?
ನಿತ್ಯ ಅನಿತ್ಯವ ನೀತಿಳಿದು ಮರ್ತ್ಯ ಕೈಲಾಸವೆಂಬುದು ಭಕ್ತರಿಗೆ
ಯುಕ್ತಿಯಲ್ಲ.

ನಿಶ್ಚಯವತಾನರಿದು ಅತ್ತಣಗೊತ್ತು ನಿಶ್ಚಯವಾಗಿ ನಿಂದಲ್ಲಿ
ಆ ಬಚ್ಚಬಯಲ ಬೆಳಗ ನಿನ್ನ ನೀನೆ ನೋಡಿಕೊ †
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ.''

---

† ಹದಿಮೂರನೆಯ ವಚನದಲ್ಲಿ ಮಹಾದೇವಿಯಮ್ಮ 'ಬೆಳಗಿನ ಮುಖದಿಂದ ಬೆಳಗಿನ ಕಳೆಯನರಿವಂತೆ ನಿನ್ನಿಂದ ನೀನೇ ತಿಳಿ.' ಎಂದು ಹೇಳಿರುವುದು ಗಮನಾರ್ಹವಾದುದಾಗಿದೆ.

# ೬. ವಚನನಿರ್ಮಾಣ

## ಅ) ವಚನಾಂಜಲಿ.

"ಹನ್ನೆರಡನೆಯ ಶತಮಾನಕ್ಕೂ ಪೂರ್ವದಲ್ಲಿ ಕನ್ನಡನಾಡಿನಲ್ಲಿ ವಿಶಿಷ್ಟ ವಚನಸಾಹಿತ್ಯ ಸಂಪ್ರದಾಯ ಆರಂಭವಾಯಿತು. ಕ್ರಿ. ಶ. ೧೦೪೦ರಲ್ಲಿಯೇ ಜೇಡರ ದಾಸಿಮಯ್ಯ, ಮೆರೆಮಿಂಡಯ್ಯ, ಬಿಬ್ಬಬಾಚಯ್ಯ, ಏಲೇಶ್ವರದ ಕೇತಯ್ಯ, ಆದಯ್ಯ, ಹಾವಿನಹಾಳ ಕಲ್ಲಯ್ಯ, ಮಾದರ ಧೂಳಯ್ಯ ಮೊದಲಾದವರು ವಚನಗಳನ್ನು ರಚಿಸಿದ್ದರು. ಬಸವಾದಿ ಪ್ರಮಥರು ಆ ಸಂಪ್ರದಾಯವನ್ನೇ ಕೈಗೆತ್ತಿಗೊಂಡು ಅದಕ್ಕೆ ತಮ್ಮ ಪ್ರತಿಭೆ, ಪಾಂಡಿತ್ಯ, ಅನುಭವದ ಕುಂದಣವಿಟ್ಟು ವಚನಸಾಹಿತ್ಯ ವಿಪುಲವಾಗಿ ಬೆಳೆದು ಕನ್ನಡ ಸಾಹಿತ್ಯಶ್ರೀಯ ಕಂಠಾಭರಣವಾಗುವಂತೆ ಮಾಡಿದರು. ಉಪನಿಷತ್ ಸಾಹಿತ್ಯದಲ್ಲಿಯೂ, ಧಮ್ಮಪದದಲ್ಲಿಯೂ, ಜಾತಕಥೆಗಳಲ್ಲಿಯೂ ವಚನ ಸಾಹಿತ್ಯದ ಮೂಲವನ್ನು ನಾವು ಕಾಣಬಹುದು. ಸಮಸ್ತ ಅನುಭವಸಾರವನ್ನು ಸೂತ್ರಪ್ರಾಯವಾಗಿ ನಾಲ್ಕು ಮಾತಿನಲ್ಲಿ ಅಡಗಿಸಿ, ಚಿರಸ್ಮರಣೀಯವಾದ ಬಗೆಯಲ್ಲಿ ನಿರೂಪಿಸುವ ವೈಖರಿ ಭಾರತೀಯರಿಗೆ ಹೊಸದಲ್ಲ. ಕನ್ನಡಕ್ಕೆ ಈ ಸಂಪ್ರದಾಯವನ್ನು ತಂದು ಅದನ್ನು ಅನ್ಯಾದೃಶವಾಗಿ ಬೆಳಸಿದ ಕೀರ್ತಿ ಬಸವಣ್ಣನವರು, ಅಲ್ಲಮಪ್ರಭುದೇವರು, ಅಕ್ಕಮಹಾದೇವಿಯವರಿಗೆ ಸೇರಬೇಕು.

ಈ ಶತಮಾನದ ಆದಿಯಲ್ಲಿ ಕನ್ನಡಸಾಹಿತ್ಯ ಪ್ರಪಂಚದ ನವೋದಯ ವಾಯಿತು. ಸಾಹಿತ್ಯದ ಗತಸಂಪ್ರದಾಯಗಳ ಪರಿಶೋಧವಾದುದಲ್ಲದೆ ನೂತನ ಸಂಪ್ರದಾಯಗಳ ಆವಿಷ್ಕಾರವೂ ಆಯಿತು. ಶ್ರೀ. ಫ. ಗು. ಹಳಕಟ್ಟಿ ಯವರು ಪ್ರಮಥರ ವಚನಗ್ರಂಥಗಳನ್ನು ಕಾಲಗರ್ಭದಿಂದ ಹೊರಗೆಳೆದು ಪರಿಷ್ಕರಿಸಿ ಪ್ರಕಟಿಸಿ ಸಾಹಿತ್ಯಪ್ರಪಂಚಕ್ಕೆ ಮಹೋಪಕಾರಮಾಡಿದರು. ವಚನ ಸಾಹಿತ್ಯಾಭ್ಯಾಸ, ಪ್ರಸಾರ ಆರಂಭವಾಯಿತು.

ಒಂದು ಪರಂಪರೆಯನ್ನನುಸರಿಸಿದ ಧರ್ಮಪ್ರಸಾರಕ್ಕೆ ವಚನರೂಪ ಹೇಗೆ ಉಪಯೋಗವಾಯಿತೋ ಹಾಗೆ ಎಲ್ಲ ವಿಚಾರಗಳ ನಿರೂಪಣಕ್ಕೂ ವಚನರೂಪ ಪ್ರಯೋಜನವಾಗುತ್ತದೆಯೆಂಬ ಮನವರಿಗೆ ಕನ್ನಡಿಗರಿಗಾಗಲು ಸ್ವಲ್ಪ ಕಾಲಾವಕಾಶ ಬೇಕಾಯಿತು. ನಮಗೆ ತಿಳಿದಂತೆ ವಚನರೂಪವನ್ನು ಸಾಹಿತ್ಯಕ್ಕೆ ಬಳಸಿಕೊಂಡ ಮೊದಲಿಗರು ಶ್ರೀ ತಿರುಮಲೆ ತಾತಾಚಾರ್ಯ ಶರ್ಮರವರು. ಶ್ರೀ ಶರ್ಮರು ೧೯೩೫ರಲ್ಲಿ ದೇಶೀಯವಿದ್ಯಾಶಾಲಾ ಪತ್ರಿಕೆ ಯಲ್ಲಿ ವಚನಮಾರ್ಗವನ್ನವಲಂಬಿಸಿ ಕೆಲವು ಕಿರುಗತೆಗಳನ್ನು ಪ್ರಕಟಿಸಿದರು. ಅವರ ತರುವಾಯ ಶ್ರೀ ದಿವಾಕರ ರಂಗರಾಯರು, ಶ್ರೀ ಜೀರಿಗೆ ಬಸವಪ್ಪ ನವರು,-'ಮಾವಿನಕೆರೆ ರಂಗಯ್ಯ'ನವರು ವಚನರೂಪವನ್ನು ಬಳಸಿಕೊಂಡರು. ಶ್ರೀ ಡಿ. ವಿ. ಗುಂಡಪ್ಪನವರ ಮಹಾಕಾವ್ಯ 'ಮಂಕುತಿಮ್ಮನ ಕಗ್ಗ'ದ ಮೇಲೂ ವಚನ ಸಾಹಿತ್ಯರೂಪ ತನ್ನ ಪ್ರಭಾವ ಬೀರಿದೆ. ಶ್ರೀ ಜೀರಿಗೆ ಬಸವಪ್ಪನವರನ್ನುಳಿದು ಇತರರ ಮೇಲೆ ವಚನಸಾಹಿತ್ಯ ಪ್ರತ್ಯಕ್ಷ ಪ್ರಭಾವ ಬೀರಿರುವಂತೆ ಕಂಡುಬರುವುದಿಲ್ಲ. ಈ ಮಾನ್ಯಸಾಹಿತಿಗಳು ವಚನಸಾಹಿತ್ಯ ಕ್ಷೇತ್ರದ ವ್ಯಾಪ್ತಿಯನ್ನು ವಿಸ್ತರಿಸಿ ಅದನ್ನು ಒಂದು ಸಂಪ್ರದಾಯದ ಆವರಣ ದಿಂದ ವಿಶಾಲಪ್ರಪಂಚಕ್ಕೆ ಕೊಂಡೊಯ್ದರು.

'ವಚನಾಂಜಲಿ' ಮತ್ತು 'ವಚನಮಂಜರಿ' ಗ್ರಂಥಗಳನ್ನು ಬರೆದಿರುವ ಸಿಡುಮಾಮಿಡಿ ಸಂಸ್ಥಾನದ ಶ್ರೀ ಜ. ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು ಸಂಪ್ರದಾಯವನ್ನು ಬಿಡದೆ ಪ್ರಗತಿಪಥದಲ್ಲಿ ಮುನ್ನಡೆದು ಸಾಹಿತ್ಯಲೋಕಕ್ಕೆ ಮಹೋಪಕಾರ ಮಾಡಿದ್ದಾರೆ. ವೀರಶೈವ ಸಂಪ್ರದಾಯದ ಪಡಿನುಡಿಗಳು, ಉಪಮೆಗಳು, ಗಾದೆಗಳು, ಕವಿ ಸಮಯ ಗಳನ್ನು ಧಾರಾಳವಾಗಿ ಉಪಯೋಗಿಸಿಕೊಂಡಿದ್ದಾರೆ. ವಚನಗಳ ರಚನೆಯ ಕಟ್ಟುಕೂಡ ಪ್ರಮಥರ ಮಾರ್ಗವನ್ನೇ ಅನುಸರಿಸಿದೆ. ಇದರ ಜತೆಗೆ ತತ್ತ್ವನಿರೂಪಣೆಗೆ ಅತ್ಯವಶ್ಯಕವಾದ ಸಮಕಾಲೀನತೆ, ಪ್ರಾಗತಿಕ ಮನೋ ಭಾವ, ಸಮರಸ ದೃಷ್ಟಿಯನ್ನು ಬೆರಸಿದ್ದಾರೆ.'' †

---

† 'ವಚನಮಂಜರಿ' ಗ್ರಂಥಕ್ಕೆ ನಾನು ಬರೆದಿರುವ ಮುನ್ನುಡಿಯಿಂದ.

'ಸಾಹಿತ್ಯದಲ್ಲಿ ಕಾವ್ಯವನ್ನೂ ಧರ್ಮವನ್ನೂ ಸಮರಸಗೊಳಿಸುವುದು ಹೆಚ್ಚಿನಗುಣ. ಧರ್ಮದ ಸತ್ಯಪ್ರಿಯತೆಯನ್ನೂ ಕಾವ್ಯದ ಸೌಂದರ್ಯ ದರ್ಶನವನ್ನು ಹಾಲು ಸಕ್ಕರೆಯಂತೆ ಕೂಡಿಸಬಲ್ಲ ರನ್ನ, ಜನ್ನ, ಹರಿಹರ, ಕುಮಾರವ್ಯಾಸರಂಥ ಕವಿಗಳು ಕನ್ನಡ ಸಾಹಿತ್ಯೇತಿಹಾಸದಲ್ಲಿ ಬಹು ಮಂದಿ ಇಲ್ಲ. ಶ್ರೀ ಶ್ರೀಗಳವರು ಆ ಹಿರಿಜಾಣ್ಮೆ ಸಾಧಿಸಿದ್ದಾರೆ. ಅದರ ಸಾಹಿತ್ಯ ಹೇಳದೆ ಧರ್ಮವ ಕಲಿಸುವ ಗುರುವಾಗಿ ಅಪರೋಕ್ಷವಾಗಿ ಅವ್ಯಕ್ತವಾಗಿ ನಮ್ಮ ಹೃದಯದಲ್ಲಿ ಧರ್ಮಧ್ವಜವನ್ನು ನೆಡುತ್ತದೆ.' †

ಶ್ರೀಗಳವರು 'ವಚನಾಂಜಲಿ'ಯನ್ನು ಎರಡು ವಿಭಾಗ ಮಾಡಿದ್ದಾರೆ. 'ಬಹಿರಂಗ,' 'ಅಂತರಂಗ.' ಬಹಿರಂಗದ ಭಾಗದಲ್ಲಿ ಲೌಕಿಕ ವಿಷಯಗಳನ್ನು ಚರ್ಚಿಸಿದ್ದಾರೆ. ಅಂತರಂಗದಲ್ಲಿ ಆಧ್ಯಾತ್ಮಿಕ ವಿಷಯಗಳನ್ನು ಕುರಿತು ವಿಚಾರ ಮಾಡಿದ್ದಾರೆ. ತಮಗೂ ಇಂದಿನ ಜಗತ್ತಿನ ಸಮಸ್ಯೆಗಳಿಗೂ ಯಾವ ಸಂಬಂಧವಿಲ್ಲವೆನ್ನುವ ಮನೋಭಾವನೆ ತೊರೆದು ಗುರುಪೀಠದವರು ಜಗತ್ತಿನ ಸ್ಥಿತಿಗತಿಗಳನ್ನು ಕುರಿತು ವಿಚಾರಮಾಡಬೇಕೆಂದು ಶ್ರೀಗಳವರು ಅಭಿಪ್ರಾಯಪಟ್ಟಿರುವುದು ಅನುಕರಣೀಯವಾಗಿದೆ.

ಪ್ರಾಂತೀಕರಣ ಸಮಸ್ಯೆ ಇಂದು ನಮ್ಮ ರಾಜಕೀಯ, ಸಾಮಾಜಿಕ ಜೀವನವನ್ನು ಮಂಥನಮಾಡುತ್ತಿದೆ. ಪ್ರಾಂತೀಕರಣವೆಂದರೆ ದೇಶ ಅನಾಯಕವಾಗಿ, ಒಡೆದು ಚೂರಾಗಿ, ಅನೈಕಮತ್ಯಕ್ಕೆಡೆಯಾಗುವುದೆಂದು ಕೆಲವರ ಅಭಿಪ್ರಾಯ; ಪ್ರಾಂತ್ಯಗಳ ಬದುಕಿಗೆ ಪ್ರಾಂತೀಕರಣ ಅತ್ಯವಶ್ಯಕ. ಭಾಷಾನುವಾರು ಪ್ರಾಂತ್ಯಗಳು ಸಂಘಟಿತವಾಗದಿದ್ದರೆ ಭಾರತದ ಬಲ ಕುಂದುತ್ತದೆ. ಭಾರತವೆಂಬ ದೇಹದ ಅಂಗಾಂಗಳೇ ಪ್ರಾಂತ್ಯಗಳು. ಅಂಗಾಂಗಗಳು ದುರ್ಬಲವಾದರೆ ಇಡಿಯ ದೇಹವೇ ಕುಸಿದುಬೀಳುತ್ತದೆ.ಎನ್ನುವುದು ಪ್ರಾಂತೀಕರಣ ವಾದಿಗಳ ಅಭಿಪ್ರಾಯ. ಈ ಬಗ್ಗೆ ಶ್ರೀಗಳವರ ಅಭಿಪ್ರಾಯ.

"ಇಂದು ಭಾಷಾವರ ಪ್ರಾಂತರಚನೆಯ ನಿವೇದನಗಳ ಒಂದು ಪ್ರಕ್ಷುಬ್ಧ ವಾತಾವರಣ, ಪ್ರಚಲಿತ ಸಮಸ್ಯೆ ನೋಡಯ್ಯ. ಈ ಪ್ರಕ್ಷುಬ್ಧ

---

† 'ಕನ್ನಡ ಕುಲರಸಿಕರು' – ಪುಟ ೯೦.

ವಾತಾವರವು ಪ್ರಾಂತೀಕರಣವಾಗದೆ ಪ್ರಶಾಂತವಾಗುವುದೆಂತು ಹೇಳಾ! ಇದರಿಂದಲೆ ಭಾರತದ ಸರ್ವೋದಯ. ಇದರಿಂದಲೆ ಭಾರತದ ಸರ್ವಾ ಸೌಂದರ್ಯ. ಪ್ರಾಂತೀಕರಣವು ವಿವಿಧಾತ್ಮಕವಾದರು ವಿಭೇದಾತ್ಮ ವಲ್ಲವಯ್ಯ. ಅಖಂಡ ಭಾರತೀಯ ರಾಷ್ಟ್ರ ಭಾವನೆಗೆ – ರಾಷ್ಟ್ರೋನ್ನ ಕುಂದಕವಲ್ಲವಯ್ಯ. ಭಾರತಾಂಗಕ್ಕೆ ಪ್ರಾಂತಗಳು ಉಪಾಂಗಗಳು. ಉಪಾಂ ಗಳನ್ನು ಛಿನ್ನ – ವಿಛ್ಛಿನ್ನವಾಗಿಸಿದ್ದರೆ ಏನು ಚಂದ ? ಯಾವ ಶಕ್ತಿ? ಯಾ ಉನ್ನತಿ ? ಯಾವ ಅಖಂಡತೆ ಹೇಳಾ ! ಭಾರತದೇಹಕ್ಕೆ ಕನ್ನಡನಾ ಒಂದು ಕೈಯೆಂದು ಭಾವಿಸೋಣ. ಕರ ತನ್ನ ಪ್ರತಿಗಳಿಂದ – ಬೆರಳುಗ ಸಮಗ್ರವಾಗಿದ್ದು ಭುಜಮಾತ್ರ ದೇಹದೊಡನೆ ಸಮ್ಮಿಲಿತವಾಗಿದ್ದರೆ ಒ ಶೋಭೆಯಲ್ಲವೆ ? ಒಂದು ಸಾರ್ಥಕವಲ್ಲವೆ ? ಇಂತಿಲ್ಲದೆ ಕೈಯನ್ನು ಕತ್ತ ಛಿದ್ರಛಿದ್ರವಾಗಿಸಿದರೆ ಏನು ಪ್ರಯೋಜನ ? ಇಲ್ಲವಾದಡೆ ಕೈಯು ಪೂರ್ಣವಾಗಿ ಭುಜದಿಂದ ಬೆರಳುಗಳವರೆವಿಗು ಶರೀರದೊಡನೆ ಬೆಸುಗೆಯಾ ದ್ದರೆ ಏನು ಸುಖ, ಯಾವ ಫಲ ? ಇದು ಕಾರಣ ಈಗಿರುವಂತೆ ಪ್ರಾಂತಗ ಪರಿಚ್ಛಿನ್ನವಾಗಿರದೆ ಭಾಷಾನುಗುಣವಾಗಿ ವಿಂಗಡಿಸಿದಲ್ಲಿ ಲೇಸು ಕಂಡಯ್ಯ ಅವರವರಿಗೆ ಆಯಾ ಪ್ರಾಂತಗಳ ಕಲೆಗಳಲ್ಲಿ – ಕೃಷಿಗಳಲ್ಲಿ – ನಾಗರಿಕ ಯಲ್ಲಿ – ನಾವೀನ್ಯದಲ್ಲಿ ಆದರೋತ್ಸಾಹ – ಅಭಿಮಾನಾಸಕ್ತಿಗಳು ಹೊ ಹೊಮ್ಮುತ್ತವೆ. ಆಯಾ ಪ್ರಾಂತಗಳ ಉನ್ನತಿ ಒಟ್ಟು ಭಾರತಕ್ಕೆ ಮೇ ಎಲ್ಲ ಪ್ರಾಂತೇಂದ್ರಿಯಗಳಿಗೆ ಭಾರತವೇ ಹೃದಯ. ಆದಡೆ ಕರಣೇಂದ್ರಿ ಕೆಲಸಗಳನ್ನೆಲ್ಲ ಹೃದಯವೊಂದೆ ನಿರ್ವಹಿಸದು, ನಿತ್ತರಿಸಿದು. ಇದು ಕಾ ಪ್ರಾಂತೀಕರಣವೆ ಪರಮೋನ್ನತಿ ಕಾಣಾ ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸಿಂಹಾಸನಾಧೀಶವಾಸ ಕುಮಾರೇಶ್ವರ.''

ಕುಲ – ಜಾತಿಗಳ ಬಗ್ಗೆ ಶ್ರೀಗಳವರು ಹೀಗೆ ನುಡಿದಿದ್ದಾರೆ.

"ಕುಲಕುಲ ಎಂಬರು ಕುಲದ ಹೊಲಬನರಿಯರು. ಚಾತುರ್ವಣ್ಯ ಗಳು ಕುಲಗಳೇ ? ಗಾಣಿಗ, ಸಿಂಪಿಗ, ಬಣಜಿಗ, ಕುಂಬರ, ಕಂ ಮಡಿವಳ ಕುಲಗಳೇ ? ಅಲ್ಲಲ್ಲ. ಇವೆಲ್ಲ ಬದುಕುವ ವೃತ್ತಿಗಳು. ಕಾಯ ಗಳು ಕುಲಗಳಾಗವು. ಕುಲವೆನೆ ಸಮೂಹ. ಈ ಅರ್ಥ ಮುಂಟಾಗಿ ಕನ್ನ

ಕನ್ನಡಿಗ – ಆಂಧ್ರ – ದ್ರಾವಿಡಗಳು ಕುಲಗಳೆಂಬರು. ಇವಾದೊಡಂ ದೇಶಭಾಷೆಗಳಿಂದಪ್ಪವು. ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶವಾಸ ಕುಮಾರೇಶ್ವರನಲ್ಲಿ ಮಾನವಕುಲವಲ್ಲದೆ ಮತ್ತೊಂದು ಕುಲವಿಲ್ಲ.''

'ಮಾನವಕುಲವಿಲ್ಲದೆ ಮತ್ತೊಂದು ಕುಲವಿಲ್ಲ'ವೆಂಬ ದಿವ್ಯವಚನ ಒಬ್ಬ ಪಟ್ಟಾಧ್ಯಕ್ಷರಿಂದ ಬರಬೇಕಾದರೆ ಅವರ ಆತ್ಮ ಸಂಸ್ಕೃತಿ ಎಂಥ ಉನ್ನತ ಮಟ್ಟದಲ್ಲಿದೆಯೆಂದು ಹೇಳಬೇಕಾಗಿಲ್ಲ. ಧರ್ಮಪೀಠಗಳಲ್ಲಿರುವ ಗುರುಗಳೆಲ್ಲಾ ಈ ಮಾತನ್ನು ಸಾರಿ ಹೇಳಿ, ಅದರಂತೆ ಆಚರಿಸಿದರೆ ನಾಡು ಬದುಕೀತು, ಧರ್ಮ ಉಳಿದೀತು.

ಭಾರತ ವರ್ಷದಲ್ಲಿ ಸನ್ಯಾಸ ಕ್ರಾಂತಿಕಾರಿಕ ಬದಲಾವಣೆಗೊಳಗಾದುದನ್ನು ನಾವು ಕಾಣಬಹುದು. ಹಿಂದೆ ಸನ್ಯಾಸಿ ಲೋಕದ ಚಿಂತೆಬಿಟ್ಟು ಅರಣ್ಯಸೇರಿ ತನ್ನ ನಿವೃತ್ತಿ ಮಾರ್ಗವನ್ನು ಹುಡುಕಿಕೊಳ್ಳಬಹುದಾಗಿದ್ದಿತು. ಹಿಂದೆ ಸನ್ಯಾಸಿ ವಿರಕ್ತ, ಆದರಿಂದು ಸನ್ಯಾಸಿ ವಿರಕ್ತನಾಗಿರಲು ಸಾಧ್ಯವಿಲ್ಲ. ಅವನ ಧ್ಯಾನ ತಪಸ್ಸು ಲೋಕಕ್ಕೆಬೇಕು. ಅವನು – ಅನುರಕ್ತನಾಗಬೇಕು. ವಿಷಯಾಸಕ್ತಿಯಲ್ಲಲ್ಲ; ಲೋಕ ಸಂಗ್ರಹದಲ್ಲಿ. ಸ್ವಾಮಿ ವಿವೇಕಾನಂದ, ದಯಾನಂದ ಸರಸ್ವತಿ, ಸ್ವಾಮಿ ಶ್ರದ್ಧಾನಂದ ಈ ಬಗೆಯ ಸನ್ಯಾಸಿಗಳು. ನಿಡುಮಾಮುಡಿ ಶ್ರೀಗಳವರು ಕೇವಲ ಪರಲೋಕ ಚಿಂತೆಯಲ್ಲಿ ಲೀನರಾಗಿ ಇಂದಿನ ಬಾಳ್ವೆ, ಸಮಸ್ಯೆಗಳು ಕಷ್ಟಸುಖಗಳನ್ನು ನಿರ್ಲಕ್ಷಿಸುವ ವಿರಕ್ತರಲ್ಲ. ತಮ್ಮ ಬುದ್ಧಿ ಧ್ಯಾನವನ್ನು ಇಂದಿನ ಜೀವನದ ಹಲವಾರು ವಸ್ತುಗಳ ಮೇಲೆ ಚೆಲ್ಲಿ ಹಲವು ಸೊಗಸಾದ ಭಾವನೆಗಳನ್ನು ವ್ಯಕ್ತಪಡಿಸಿದ್ದಾರೆ.

ನಮಗೆ ದೊರೆತಿರುವ ಸ್ವಾತಂತ್ರ್ಯದ ಬಗ್ಗೆ ಶ್ರೀಗಳವರು ಹೇಳುತ್ತಾರೆ; "ಅರಹೊಟ್ಟೆಯುಂಬುದು ಸ್ವಾತಂತ್ರ್ಯವೆ? ಅರೆಮೈ ಬಟ್ಟೆ ಹೊದಿವುದು ಸ್ವಾತಂತ್ರ್ಯವೆ? ತಾ ಬೆಳೆದುದು ತನಗಿಲ್ಲದೆ ಹೋದುದು ಸ್ವಾತಂತ್ರ್ಯವೆ? ತನ್ನ ಹೆಂಡತಿ ತನ್ನವಳಾಗದಂತಾದುದು ಸ್ವಾತಂತ್ರ್ಯವೆ? – ಇದೆಲ್ಲವೂ ಪರತಂತ್ರ್ಯವಲ್ಲವೆ ಹೇಳಾ.... ?''

ರಾಷ್ಟ್ರಧ್ವಜದ ಬಗ್ಗೆ :—

"ತ್ರಿವರ್ಣ ಧ್ವಜವು ತ್ರಿಗುಣಮಯವೆಂದು ಕೆಲವರು, ಸತ್ಯಾಹಿಂಸೆ ಸಮತಾವಾದಿಯೆಂದು ಕೆಲವರು, ಹಿಂದು – ಆಂಗ್ಲ – ಮುಸ್ಲಿಂ ಸೂಚಕ ವೆಂದು ಕೆಲವರು. ಅ. ಉ. ಮ. ಈ ಬೀಜಾಕ್ಷರ ಸಂಯುಕ್ತ ಓಂಕಾರ ವಿದ್ದಂತೆ ತ್ರಿವರ್ಣ ಧ್ವಜ. ಯಾರು ಯಾವ ಅರ್ಥವನ್ನಾದರೂ ಪ್ರತಿಪಾದಿಸ ಬಹುದು. ಇದು ಕಾರಣ ಶ್ರೀಗಿರಿ ಸೂರ್ಯಸಿಂಹಾಸನಾಧೀಶವಾಸ ಕುಮಾ ರೇಶ್ವರನಲ್ಲಿ ಶಕ್ತಿ, ವಿದ್ಯೆ, ಸಂಪತ್ತುಗಳ ದ್ಯೋತಕವೆ ರಾಷ್ಟ್ರಧ್ವಜವೆಂದೆ ನಯ್ಯ! ಕೆಂಪು ಶಕ್ತಿರೂಪು, ಬಿಳುಪು ವಿದ್ಯೆಯ ಗುರುತು, ಹಸರು ಸಂಪ ತ್ತಿನ ಕುರುಹು, ಇವರಿಂದಾಗಿ ಅಶೋಕ ಚಕ್ರಾಂಕಿತಕ್ಕೆ ಸಾರ್ಥಕ; ಅಶೋಕ ಶಬ್ದಾರ್ಥಪೂರಕ; ರಾಷ್ಟ್ರೀಯ ಧರ್ಮದ್ಯೋತಕಶಕ್ತಿ – ವಿದ್ಯೆ – ಸಂಪತ್ತುಗಳ ಸಂಪಾದನೆಯಿಂದಲೆ ನಮ್ಮ ಸ್ವತಂತ್ರ ಭಾರತವು ಚಿರಸ್ಥಿರವಾಗುವುದೆಂದು ಸರ್ವಾಂಗಸುಂದರವಾಗಿ ಸರ್ವೋತ್ಕೃಷ್ಟವಾಗುವುದೆಂದು ಸಾರುವುದೆ ನಮ್ಮ ತ್ರಿವರ್ಣಧ್ವಜದ ತತ್ವಾರ್ಥ ಕಾಣಿರಣ್ಣಾ?"

ನೂತನ ಜಗತ್ತಿನ ನಿರ್ಮಾಣದಲ್ಲಿ ಶ್ರಮಜೀವಿಗಳ ಪಾತ್ರ ಪ್ರಧಾನ ವಾದುದು. ನಾಳಿನ ಜಗತ್ತು ಶ್ರಮಜೀವಿಗಳ ಜಗತ್ತು. ಶ್ರೀಗಳವರು ನಾಳಿನ ಜಗತ್ತಿನ ಸ್ವರೂಪವನ್ನು ಸ್ಪಷ್ಟವಾಗಿ ಕಂಡಿದ್ದಾರೆ.

"ಭಾರತ ಸತ್ಯಾಗ್ರಹ ಸಮರದಲಿ ಕೂಲಿಗಾರರ ಮೇಲೆ ಒಂದು ಮೇಲು ನೆಸಗಿತಯ್ಯ. ಭಾರತದ ಕೈಂಕರ್ಯದ ಸಂಕೋಲೆಯ ಸಡಲಿಸಲು ಕಾರ್ಮಿಕ ಸುಂಕುಲವು ಒಂದು ಸಾಧನವಾಯಿತಯ್ಯ. ಪರಕೀಯ ಪ್ರಭುತ್ವದ ಕೀಲು ಕೀಳಲು ಕೂಲಿಗಾರರ ಸಮ್ಮೇಳನ ಸಾನುಕೂಲವಾಯಿತಯ್ಯ. ಕಾರ್ಮಿಕರ ಸಂಘಗಳಿಂದ ಭಾಗ್ಯವಂತ ಬಿಂಕಗರಿಗೆಲ್ಲ ಕಂಪನಹುಟ್ಟಿ ಅನುಕಂಪ ಆವಿ ರ್ಭವಿಸಿತಯ್ಯ. ಇದರಿಂದಾಗಿ ಕೂಲಿಗಾರರಿಗೆ ಎಲ್ಲೆಡೆಯು ಪುರಸ್ಕಾರ, ಕೂಲಿಯ ಪುರಸ್ಕಾರ, ಕೂಲಿಗಳ ಪ್ರಗತಿಯ ಅವಿಷ್ಕಾರ ಒಮ್ಮೊಡಿ ನಿಂತವಯ್ಯ ಇಂಪಾಗಿ, ಕೂಲಿಗಳು ಕೀಳಲ್ಲ; ಹೇಳನಾರ್ಹರಲ್ಲ. ಕಾರ್ಮಿಕರೆ ಅರ್ಥೋತ್ಪತ್ತಿ, ರಾಷ್ಟ್ರೋನ್ನತಿಗಳಿಗೆ ಮೂಲವಯ್ಯ. ಇದು ಕಾರಣವಾಗಿ 'ಕಾರ್ಮಿಕ ಮೂಲ ದ್ರವ್ಯಂ, ದ್ರವ್ಯ ಮೂಲಂ ಜಗತ್' ಎಂದು ಹೇಳಬೇಕಾ ದುದೆ ದಿಟ. ಕೂಲಿಗಳೆ ಸರ್ವಕ್ಕನುಕೂಲಿಗಳು ಕಾಣಾ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ ಕುಮಾರೇಶ್ವರ."

## ಅ) ವಚನಮಂಜರಿ

'ವಚನಮಂಜರಿ' ಆರು ಅಧ್ಯಾಯಗಳಿಂದ ಕೂಡಿ (ಪ್ರಾರ್ಥನೆ, ಪಿಂಡ-ಪಿಂಡಜ್ಞಾನ, ವೈಯಕ್ತಿಕ, ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಕ) ೪೪೦ ವಚನಗಳನ್ನೊಳಗೊಂಡಿದೆ.

ಪ್ರಾರ್ಥನೆಯ ಅಧ್ಯಾಯದಲ್ಲಿ ಶ್ರೀಗಳವರು ಪಂಚಾಚಾರ್ಯರಿಗೆ ನಮಿಸಿ, ತಮ್ಮ ಪರಂಪರೆಯ ಗುರುಗಳಾದ ಪಂಡಿತಾರಾಧ್ಯರಿಗೆ ಭಕ್ತಿಯ ಕಾಣಿಕೆಯರ್ಪಿಸುತ್ತಾರೆ. ಶಿಷ್ಯನನ್ನು ಮರೆಯದೆ ಅವನನ್ನು ಜೀವನ್ಮುಕ್ತನನ್ನಾಗಿ ಮಾಡಿ ಜೀವರತ್ನನೆಂದೆನಿಸಿ ಎಂದು ಅಂಗಲಾಚಿ ಬೇಡಿಕೊಂಡಿದ್ದಾರೆ.

"ವಿದ್ಯಾವಾರಿಧಿ ಚಂದ್ರರೆ
ವಿಶ್ವಪ್ರಗತಿ ಪ್ರಭಾಕರರೆ, ವಿಶಿಷ್ಟಸಿದ್ಧಿ ಸಮನ್ವಿತರೆ,
ನಿಮ್ಮೊಳು ನಿವ್ಮೊಳು ಬಿನ್ನವಿಸುವೆನು; – ಕರುಣಿಸಿರೆ.
ವಿಲಯ ವಿಶ್ವದಲಿ ನಿಡುಗಾಲ ನಿಲ್ಲುವ ಬದುಕಾವುದು ಹೇಳಿರೆ?
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರನಲ್ಲಿ
ಬೇರಾವ ಭಾಗ್ಯಬೇಡ.
ಅನುಭಾವ ಅಮರ ಸಾಹಿತ್ಯವೊಂದನು ಕರುಣಿಸಿ ಸಲಹಿರೆ
ಇದುವೆ ಆನು ಬೇಡುವ ಭಾಗ್ಯ ಕೇಳಿರೆ."

ಎರಡನೆಯ ಅಧ್ಯಾಯದಲ್ಲಿ ಭಗವಂತನ ಅನಂತ, ಅನಾದಿ ವ್ಯಾಪ್ತಿಯನ್ನು, ಅವನ ಸಾಕಾರ ನಿರಾಕಾರ ಸ್ವರೂಪವನ್ನು ವರ್ಣಿಸುತ್ತಾ

"ಅಂಜನದ ನೆರವಿನಿಂದ ಮಣ್ಣೊಳಗಿನ
ಹೊನ್ನು ತೋರುವಂತೆ
'ಎಕ್ಸರೇ' ನೆರವಿನಿಂದ ಗರ್ಭದ ತಿರುಳು ಹುರುಳುಗಳ ಕಾಣುವಂತೆ
ದೇವ, ನಿಮ್ಮ ಅನುಭಾವ ಬಲದಿಂದ

ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರನ
ನಿಜನಿಲವು ನೋಟಕ್ಕೆ ನಿಂದಿತ್ತು ; ಭಾವಕ್ಕೆ ಬಂದಿತ್ತು.''

ಎಂದು ಸೂಚಿಸಿದ್ದಾರೆ. ಕನ್ನಡ ನಾಡಭಕ್ತರಾದ ಶ್ರೀಗಳವರು ಕನ್ನಡ ನಾಡನ್ನು ಕುರಿತು ಹೇಳಿರುವ ವಚನ ಅವರ ಸ್ವದೇಶಾಭಿಮಾನದ ಕುರುಹಾಗಿದೆ.

"ಕರುನಾಡ ಸಿರಿಸೊಬಗುಗಳ ಹೇಳಲಳವೆ ಹೇಳಾ !
ನವಧಾನ್ಯ ನವರತ್ನಗಳ ನೆಲೆವೀಡು ಕರುನಾಡು.
ನವನಿಧಿ ತವನಿಧಿಗಳ ತವರೂರು ಕರುನಾಡು.
ನವರಸ ನವರಂಗಗಳ ನೆಲೆವೀಡು ಕರುನಾಡು.
ಕರುನಾಡು ಭಾರತದ ಕರುಮಾಡ ನೋಡಾ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ.''

ಮೂರನೆಯ ಅಧ್ಯಾಯದ ವೈಯಕ್ತಿಕ ವಚನಗಳಲ್ಲಿ ಶ್ರೀಗಳವರ ಸಾಧನಯೋಗದ ಚಿತ್ರ ಕಲಾಪೂರ್ಣವಾಗಿ ಸತ್ಯಪೂರ್ಣವಾಗಿ ಮೂಡಿದೆ.

"ಎನ್ನ ತನುವಿಂಗೆ ಆರೋಗ್ಯವನೀಯದೆ
ತೊಳಲಿಸಿದ ಕಾರಣವೇನಯ್ಯ.
ಎನ್ನ ಮನಕ್ಕೆ ಅರಿವನೀಯದ
ಅಳಲಿಸಿದ ಅಂತರಂಗವೇನಯ್ಯ.''

ಎಂದು ಸಾಧಕ ಕೇಳುತ್ತಾನೆ. 'ದಿಟವ ನುಡಿದರೆ ಮೆಚ್ಚದೀ ಲೋಕ. ಮೆಚ್ಚಿ ನುಡಿಯಲಹುದೆ ?'

ಸಾಧಕನ ಪರೀಕ್ಷಾರ್ಥವಾಗಿ ಭಗವಂತ ಮಾಯೆಯ ಬಲೆಯನ್ನೊಡಿದ್ದಾನೆ.

"ಪೀಠಾಧಿಕಾರದ ಬಲೆಯನೆಸೆದೆ.
ಬಿದ್ದಿಹೆನು, ಬಳಲಿಹೆನು.
ಉತ್ಸವದ ಅಭಿಲಾಷೆ ಅಳವಟ್ಟಿತ್ತು.

ವೈಭವದ ಆಸೆ ಆವರಿಸಿತ್ತು.
ಜನಜಂಗುಳಿಯ ಹಂಗಿಗ ನಾನಾದೆ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ,
ನಿನ್ನ ಸಂಗ ಸವಿಯತೋರದೆ."

ಸಾಧಕ ಬಯಸುವುದು ಧನ, ಕನಕ, ಕೀರ್ತಿ, ಪ್ರತಿಷ್ಠೆಗಳನ್ನಲ್ಲ.

"ಎದೆಗೊಳದಲ್ಲಿ ದಯಾರಸವ ಹರಿಯಿಸು.
ಶಿರದರಮನೆಯಲ್ಲಿ ಮುತ್ತು ಮಾಣಿಕ್ಯವ ತುಂಬಿಸು.
ತನು ತೋಂಟದಲ್ಲಿ ತನಿವಣ್ಣುಗಳ ತೋರಿಸು.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ
ನಿಮ್ಮ ದಾನವನುಂಡು ದುಮ್ಮಾನ ನೀಗುವೆನು."

ತನ್ನತನದ ಅರಿವುಳ್ಳ ಸಾಧಕ ಪಟ್ಟಾಧಿಕಾರಿಯಾಗಿರಲಿ, ಚರಮೂರ್ತಿಯಾಗಿರಲಿ ಅವನು ಕರ್ತವ್ಯಭ್ರಷ್ಟನಾಗುವುದಿಲ್ಲ. ಭಗವಂತನಿಗರ್ಪಿತವಾದ ಅವನ ತ್ರಿಕರಣ, ಹೊಲಬುಗೊಂಡ ಲೋಕದ ವಿಶೋಭನೆಗಳಿಗೆ ತುತ್ತಾಗುವುದಿಲ್ಲ. ಪರಿಸ್ಥಿತಿಯ ಬಲೆಗೆ ಬಿದ್ದ ಸಾಧಕ ಧೃತಿಗೆಡದಂತೆ ಎಷ್ಟು ಎಚ್ಚರವಾಗಿ, ಸಾಗಬೇಕೆಂಬುದನ್ನು ಶ್ರೀಗಳವರು ಮಾರ್ಮಿಕವಾಗಿ ಸೂಚಿಸಿದ್ದಾರೆ.

ಆತ್ಮಕಥನ ರೂಪವಾಗಿ ಶ್ರೀಗಳವರು ರಚಿಸಿರುವ ವೈಯಕ್ತಿಕ ವಚನಗಳಲ್ಲಿ ಅವರ ಸತ್ಯಪ್ರೇಮ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿದೆ. ಶ್ರೀಗಳವರ ಶಿಕ್ಷಣ ವಿರಕ್ತ ವರ್ಗದವರಲ್ಲಿ ಆಯಿತು. ಅವರ ಆತ್ಮ ಸಂಸ್ಕೃತಿ ಬಸವಣ್ಣ, ಅಲ್ಲಮಪ್ರಭು, ಮಹಾದೇವಿಯಕ್ಕ, ಚನ್ನ ಬಸವಣ್ಣ ಮೊದಲಾದ ಪ್ರಮಥರ ದಿವ್ಯಚರಿತ್ರೆಗಳನ್ನಪ್ಪಿಕೊಂಡಿತು. ಶ್ರೀಗಳವರಿಗೆ ಗುರುವರ್ಗದ ಪೀಠಾಧಿಕಾರ ದೊರೆಯಿತು. ಗುರು ವಿರಕ್ತರಲ್ಲಿ ನೆಲಸಿರುವ ವಿನಾಕಾರಣವಾದ ಸಂಘರ್ಷಣೆ ಕೊನೆಗಾಣಬೇಕಾದರೆ ಶ್ರೀಗಳವರ ಪ್ರಯತ್ನದಿಂದಲೇ ಸಾಧ್ಯ. ಉಭಯಪಕ್ಷದ ಮಹನೀಯರನ್ನು ಏಕಪ್ರಕಾರವಾದ ಭಕ್ತಿಯಾದರದಿಂದ ಕಂಡು ಅವರಲ್ಲಿನ ಭಾವಸಮನ್ವಯವನ್ನು ಎತ್ತಿ ಹಿಡಿಯುವ ಘನ

ಕೆಲಸದಲ್ಲಿ ಶ್ರೀಗಳವರು ಉದ್ಯುಕ್ತರಾಗಿದ್ದಾರೆ. ವೀರಶೈವ ಸಮನ್ವಯಾಚಾರ್ಯರಾದ ಶ್ರೀಗಳವರನ್ನು

"ಆಚಾರ್ಯವರ್ಗದವರೆಲ್ಲ ಎನ್ನ ಹೊರಗೆಂಬರು.
ವಿರಕ್ತವರ್ಗದವರೆಲ್ಲ ಎನ್ನ ಹೊರಗೆಂಬರು. ಇದು ದಿಟವೆ ?
ಆ ವರ್ಗ ಈ ವರ್ಗಗಳೊಳಗೆ ಅವರಿವರಿರಲಿ.
ಅಪವರ್ಗ ನನಗಿರಲಿ. ಅನುಗ್ರಹಿಸಲಾರೆಯಾ ?"

"ಶರಣ ಸಾಹಿತ್ಯವನೆ ಬರೆದಿಹೆನೆಂಬರು.
ಬರೆದರೇನು ? ಭಾವಿಸುವಡೆ
ಶರಣರು ಲಿಂಗಾಂಗಿಗಳಲ್ಲವೆ ? ಅಷ್ಟಾವರಣ ನಿಷ್ಠರಲ್ಲವೇ ?
ಪಂಚಾಚಾರ ಪರಾಯಣರಲ್ಲವೆ ? ಷಟ್‌ಸ್ಥಲ ಸಂಪನ್ನರಲ್ಲವೇ ?
ಆಗಲಿ, ಆಗದಿರಲಿ ;
ಸಾಹಿತಕ್ಕೆ ಭಿನ್ನ ಭೇದಗಳುಂಟೆ ? ಪಕ್ಷ ವಿಪಕ್ಷಗಳುಂಟೇ ?
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರನ
ಗುಣಕ್ಕೆ ಮತ್ಸರವೆ ?"

ಸಾಧಕನ 'ತನುವೆಂಬ ತೋಟದಲಿ ಅಂತಃಕರಣಂಗಳೆಂಬ ತುಂಬಿಗಳು ತುಂಬಿ ಝೇಂಕರಿಸುವಾಗ' ಅದರಲ್ಲಿ ಭಿನ್ನಭೇದ ಭಾವಗಳು, ಈರ್ಷೆ ರೋಷಗಳು, ಶೋಕಮೋಹಗಳು ಮನೆಮಾಡಲು ಶಕ್ಯವೇ ?

ಶ್ರೀಗಳವರ ಮನಃಶುದ್ಧಿಗೆ, ಅಂತರಂಗ ವಿಕಾಸಕ್ಕೆ, ಉದಾತ್ತ ವಿಚಾರ ವೈಭವಕ್ಕೆ ಅವರ ಸಾಹಿತ್ಯ ಭಕ್ತಿಯೇ ಕಾರಣವೆನ್ನಬಹುದು. ಸಾಹಿತ್ಯವನ್ನು ಕಡೆಗಾಣಿಸಿ ಕೇವಲ ಮಠ ಪರಂಪರೆಯ ಕುರುಡುಜಾಡನ್ನೇ ಹಿಡಿದು ಶ್ರೀಗಳವರು ಹೋಗಿದ್ದರೆ ಅವರಲ್ಲಿ ಈ ಸಂಸ್ಕೃತಿ ನೆಲಸುತ್ತಿತ್ತೆಂದು ಧಾರಾಳವಾಗಿ ಹೇಳಲು ಬಾರದು. ಮಠಕ್ಕೆ 'ನಾನು–ನನ್ನದು' ಎನ್ನುವ ಮಮಕಾರವಿದೆ; ಸಾಹಿತ್ಯದಲ್ಲಿ ಮಮಕಾರಕ್ಕೆ ಎಡೆಯಿಲ್ಲ. ಮಠ ಹೇಳುತ್ತದೆ, 'ನನ್ನ ದಾರಿ ಹಿಡಿದು ನಡೆದರೇ ಮುಕ್ತಿ – ಅನ್ಯಮಾರ್ಗ ಗರ್ಹಣೀಯ. ಸಾಹಿತ್ಯ ಹೇಳುತ್ತದೆ 'ಯಾವ ಮಾರ್ಗ ಹಿಡಿದುಹೋದರೂ, ಚಿಂತೆಯಿಲ್ಲ.

ಸತ್ - ಚಿತ್ - ಆನಂದದ ಗುರಿ ಮುಟ್ಟಿದರೆ ಸಾಕು.' ಮತ ಗೌರವಿಸುವುದು ತನ್ನ ಪರಂಪರೆಯಲ್ಲಿ ಬಂದ ಆಚಾರ್ಯರನ್ನು ಮಾತ್ರ. ಸಾಹಿತ್ಯ ಗೌರವಿಸುವುದು ಎಲ್ಲ ಪರಂಪರೆಗಳ ಎಲ್ಲ ಆಚಾರ್ಯರನ್ನು. ಮತದ ಹೆಸರಿನಲ್ಲಿ ನಡೆಯುತ್ತಿರುವ ಹುಚ್ಚು ಹೋರಾಟ ಇಳಿಮುಖವಾಗಿ ಲೋಕ ಕಲ್ಯಾಣವಾಗಬೇಕಾದರೆ ಸಾಹಿತ್ಯದ ಪ್ರಭಾವ ವಿಸ್ತರಿಸಬೇಕು.

ಸಾಹಿತ್ಯಕ್ಕೆ ಜಾತಿಮತಗಳ ಸೋಂಕಿಲ್ಲ; ದೇಶ, ಭಾಷೆಗಳ ಇತಿಮಿತಿ ಯಿಲ್ಲ; ವಯಸ್ಸು, ಅಧಿಕಾರ, ಸಂಪತ್ತುಗಳ ಕಟ್ಟಿಲ್ಲ. ಫ್ರಾನ್ಸಿನ ಮಹಾಕವಿ ಮೋಲಿಯರ್ ಅದನ್ನು ಜನಪದ ರಾಜ್ಯವೆಂದು ಕರೆದಿದ್ದಾನೆ. ಶ್ರೀಗಳವರು ಸಾಹಿತ್ಯದ ವ್ಯಾಪ್ತಿಯನ್ನು ಕುರಿತು ಆಡಿರುವ ಮಾತು ಗಮನೀಯವಾಗಿದೆ.

"ಸೀಮೆ ರಾಜಸಿಗಲ್ಲದೆ ರಸಜ್ಞನಿಗುಂಟೆ ?
ಸೀಮೆ ವಾರಿಧಿಗಲ್ಲದೆ ವಾಙ್ಮಯಕ್ಕುಂಟೆ ?
ಸೀಮೆ ರಸಾನ್ನಕುಂಟಲ್ಲದೆ ರಸೋಕ್ತಿಗುಂಟೆ ?
ಶ್ರೀ ಸಿಡುಮಾಮುಡಿ ಶ್ರೀಗಿರಿ ಸೂರ್ಯಸಿಂಹಾಸಿನಾಧೀಶ್ವರ,
ಸೀಮಾತೀತ ಸಾಹಿತಿ ; ಸೀಮಾತೀತ ಸಾಹಿತ್ಯ."

ಶ್ರೀಗಳವರು ಸಾಹಿತ್ಯಮಾರ್ಗದಲ್ಲಿ ಅಧ್ಯಾತ್ಮವನ್ನ ಳವಡಿಸಿಕೊಂಡಿರುವ ರಸಯೋಗಿಗಳು.

"ಶಬ್ದ ಶುದ್ಧಿಯೆ ಮಂತ್ರಶುದ್ಧಿ ಕಂಡಯ್ಯ.
ನಿತ್ಯಾಭಾಸವೇ ನಿತ್ಯಾನುಷ್ಠಾನ ಕಂಡಯ್ಯ.
ಸಾಹಿತ್ಯ ಸೇವೆಯೆ ಒಲವಿನ ಪೂಜೆ ಕಂಡಯ್ಯ.
ಕಾವ್ಯಾನಂದವೆ ಎನಗೆ ಪ್ರಸಾದ ಪರಿತೃಪ್ತಿ ಕಂಡಯ್ಯ."

"ಸಾಹಿತ್ಯ ಸಂಗ್ರಹವೆ ಕಾಮಧೇನುವೆನಗೆ.
ಸಾಹಿತ್ಯ ಸಂಗ್ರಹವೆ ಕಲ್ಪವೃಕ್ಷವೆನಗೆ.
ಸಾಹಿತ್ಯಾಭ್ಯಾಸವೇ ಚಿಂತಾಮಣಿಯೆನಗೆ.
ಸಾಹಿತ್ಯಾಭ್ಯಾಸವೆ ಪರುಷದ ಕಣಿಯೆನಗೆ.

ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ
ಸಾಹಿತ್ಯವೆ ಪ್ರಾಣಶಕ್ತಿಯೆನಗೆ.''

"ಸಾಹಿತ್ಯ ಸೇವೆಯೆ ಎನಗೆ ಭಾಗ್ಯದ ಭಂಡಾರ ನೋಡ.
ಸಾಹಿತ್ಯ ಸೇವೆಯೆ ಎನಗೆ ಪುಣ್ಯದ ಪುರುಳು ನೋಡ.
ಸಾಹಿತ್ಯ ಸೇವೆಯೆ ಎನಗೆ ಸೌಖ್ಯದ ಸದನ ನೋಡ.
ಸಾಹಿತ್ಯ ಸೇವೆಯೆ ಎನಗೆ ಐಕ್ಯದ ಆನಂದ ನೋಡ."

ಸಾಹಿತಿಯನ್ನು 'ನಾದಬಿಂದು ಕಲಾತ್ಮಕ ಸಿದ್ಧ'ನೆಂದು ಕರೆದು ಶ್ರೀಗಳವರು 'ಒಮ್ಮೆ ಸಾಹಿತ್ಯ ಸುಕ್ಷೇತ್ರದಲ್ಲಿ ವಿಹರಿಸಿದರೆ, ಒಮ್ಮೆ ಸಾಹಿತ್ಯ ರಸತೀರ್ಥವನ್ನು ಕೊಂಡರೆ' ಮುಕ್ತಿ ಸುಖ ಒಮ್ಮೆಗೆ ಸಿದ್ಧಿಸುವುದು ಎಂದು ಹೇಳುತ್ತಾರೆ.

ಬಾಳನ್ನು ಏಕದೇಶೀಯವಾಗಿ ನೋಡುವವನಿಗೆ ಎಲ್ಲವೂ ವಿಕರ್ಷಕ ವಾಗುತ್ತದೆ; ಅದನ್ನೇ ಅನೇಕದೇಶೀಯವನ್ನಾಗಿ ನೋಡುವವನಿಗೆ ಎಲ್ಲವೂ ಆಕರ್ಷಕವಾಗುತ್ತದೆ. ಸಮರಸವಿದ್ದಲ್ಲಿ ಮಾತ್ರ ಸಮದರ್ಶನ ದೊರೆಯುವುದು. ಶ್ರೀಗಳವರು ಶಾಸ್ತ್ರ–ಸಾಹಿತ್ಯಕ್ಕೆ ಕಲ್ಪಿಸಿರುವ ಸಂಬಂಧ ಸ್ವಾರಸ್ಯವಾಗಿದೆ.

"ಸಾರಸ್ವತ ಪ್ರಪಂಚವದು
ಶಾಸ್ತ್ರ–ಸಾಹಿತ್ಯ ಎಂಬುದಾಗಿ ಇತ್ತೆರನಾಗಿಹುದು ನೋಡ.
ಪ್ರಭುಹೃದಯವುಳ್ಳುದೇ ಶಾಸ್ತ್ರ.
ಪ್ರಮದಾಹೃದಯವುಳ್ಳುದೇ ಸಾಹಿತ್ಯ ನೋಡ."

ಸಾಸ್ಕೃತಿಕ ವಚನಗಳಲ್ಲಿ ನಮ್ಮ ನಿತ್ಯಜೀವನಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳು, ಸಮಸ್ಯೆಗಳು, ಘರ್ಷಣೆಗಳ ಬಗ್ಗೆ ಶ್ರೀಗಳವರು ಮಾರ್ಮಿಕವಾಗಿ ನುಡಿದಿದ್ದಾರೆ. ಸಂಸ್ಕೃತಿಯೆಂದರೆ ಪುಸ್ತಕ ಪಾಂಡಿತ್ಯವಲ್ಲ ಹಳೆಯ ಕತೆಯನ್ನು ಹೇಳಿಕೊಂಡು ಕೂಡುವುದಲ್ಲ. ನಮ್ಮ ಬಾಳು ನಮ್ಮ ಸಂಸ್ಕೃತಿಯ ಪ್ರತೀಕವಾಗಬೇಕು. ಆಚಾರ, ವಿಚಾರಗಳಿಗೆ ತಾದಾತ್ಮ್ಯವಿಲ್ಲದ ಬಾಳು ನಿರರ್ಥಕ, ನಿಷ್ಪ್ರಯೋಜಕ.

"ನಮ್ಮ ಆಡಳಿತಕ್ಕೆ ಬಂದಲ್ಲಿ
ದೇಶವನುದ್ಧರಿಸುವೆವೆಂದು ಭಾಷೆಯ ನೂಂಕುವರು;
ವೇಷವ ಸೋಂಕುವರು; ವೋಸಕ್ಕೆ ಮೀಸಲಪ್ಪರು.
ನಾಶಕ್ಕೆ ಹೇಸರು. ಅಧಿಕಾರಾರೂಢರಾಗದೆ
ಕೊಲ್ಲುವವರು ಅಧಿಕಾರಿಗಳಾಗಿ ಕೊಲ್ಲದಿಹರೆ ಹೇಳಾ."

"ಜಾತಿಮೈತ್ರಿಯ ಮಾತನಾಡುವರು.
ವ್ಯಕ್ತಿವೈರವ ತ್ಯಜಿಸರು.
ಸ್ವಾರ್ಥವೃತ್ತಿಯ ನಿವೃತ್ತಿ ಮಾಡರು.
ಸಂಘಾಭಿಮಾನದ ಸಂಕುಚಿತ ಸ್ವಭಾವವ ನೀಗರು.
ಇನ್ನೆತ್ತಣ ಜಾತಿಮೈತ್ರಿ ?
ಇನ್ನೆಂದಿಗೆ ಸಮಸುಖಚೈತ್ರ ಹೇಳಾ."

"ಸ್ವಾತಂತ್ರ್ಯ ಸೂರ್ಯನು ಮೇಲೇರಿದಂತೆ
ಅತಂತ್ರಜೀವನದ ಕಳ್ತಲೆ ಕವಿದು ಬಪ್ಪುದಯ್ಯ.
ಸತ್ಯಾಗ್ರಹವು ಹೆಚ್ಚಿದಂತೆ
ಸತ್ಯದ ನಿಗ್ರಹವು ಹೆಚ್ಚುತ್ತಿದೆಯಯ್ಯ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ,
ಆಹಾರದ ಯೋಜನ ನಡೆದಂತೆ
ನಿರಾಹಾರದ ಯಾಚನೆ ಮುನ್ನುಗ್ಗುತಿದೆಯಯ್ಯ.
ಇದೇನು ವಿಚಿತ್ರ ಹೇಳಯ್ಯ."

"ಋಷ್ಯಾಶ್ರಮಗಳು ಕೃಷ್ಯಾಶ್ರಮಂಗಳಾಗಿಹವು-
ಸಂನ್ಯಾಸಿ ಮಠಗಳು ಸಂಸಾರಿ ಮನೆಗಳಾಗಿಹವು.
ಸಂನ್ಯಾಸ ಶಾಸ್ತ್ರಬೋಧೆ ನಡೆವಲ್ಲಿ
ಸಂತಾನಶಾಸ್ತ್ರಪ್ರಯೋಗ ನಡೆದಿಹುದು ನೋಡಾ."

"ಜಾತ್ಯಂಧರು ಹಳಬರು.
ನೀತ್ಯಂಧರು ಹೊಸಬರು.

ಧರ್ಮಾತ್ಮರು ಹಳಬರು.
ಕರ್ಮಾತ್ಮರು ಹೊಸಬರು.
ಹಳಬರಿಗೆ ನೀತಿಯ ನೆಲೆಯುಂಟು ;
ಹೊಸಬರಿಗೆ ನೀತಿಯೂ ಇಲ್ಲ. ಜಾತಿಯೂ ಇಲ್ಲ."

"ಬಡವರ ಮೇಲೆ ಭಾಗ್ಯವಂತರು,
ಬುದ್ಧಿಹೀನರ ಮೇಲೆ ಬುದ್ಧಿವಂತರು.
ಪ್ರಮದೆಯರ ಮೇಲೆ ಪುರುಷರು
ಒಡೆತನವ ತೋರುವುದು ನಾಗರಿಕ ಸಂಸ್ಕೃತಿಯಲ್ಲವಯ್ಯ.
ಎಲ್ಲರಲಿ ಆತ್ಮೈಕ್ಯತೆ ಮಾನವ್ಯಸಮತೆಗಳ ತೋರಿ
ತಾನಾಚರಿಪುದೆ ನಾಗರಿಕ ನಿಜ ಸಂಸ್ಕೃತಿಯಯ್ಯ."

ಆಧುನಿಕ ಯುಗ, ವೈಜ್ಞಾನಿಕ ನಾಗರಿಕತೆ, ಸ್ವಾತಂತ್ರ್ಯದ ತರುವಾಯ ಬಂದಿರುವ ಪರಿಸ್ಥಿತಿಯನ್ನು ಶ್ರೀಗಳವರು ಮನಮುಟ್ಟುವಂತೆ ನಿರೂಪಿಸಿದ್ದಾರೆ. ಲೋಕದ ನೀತಿರಾಹಿತ್ಯ ವ್ಯವಹಾರವನ್ನು, ಸೀಮಾತೀತ ಸ್ವಾರ್ಥವನ್ನು, ರಾಕ್ಷಸೀ ಪ್ರವೃತ್ತಿಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾರೆ. ಆದರೆ ಶ್ರೀಗಳವರು ನಿರಾಶಾವಾದಿಗಳಲ್ಲ. ನಮ್ಮ ನೈತಿಕಪತನ ಸ್ವತಃಸ್ಸಿದ್ಧವಾಗಿದೆ. ನಮ್ಮ ಬಾಳು ಅಡ್ಡದಾರಿ ಹಿಡಿದು ವಿನಾಶದತ್ತ ಸಾಗುತ್ತಿದೆ. ಇದಕ್ಕೆ ಮುಕ್ತಿಯಿಲ್ಲವೇ ? ಸಹಸ್ರಾರು ವರ್ಷಗಳ ದಿವ್ಯ ಸಂಸ್ಕೃತಿಯಲ್ಲಿ ಬೆಳೆದು ಬಾಪುವಿನ ಪುಣ್ಯಪ್ರಭಾವದಿಂದ ಪುಷ್ಟಿಗೊಂಡಿರುವ ಈ ನಾಡು ನಾಶವಾಗುತ್ತದೆಯೇ ? ನಾಶವಾಗಬೇಕೇ ? ಎನ್ನುವ ಪ್ರಶ್ನೆ – ತಳಮಳ ಭಾವುಕರ ಮನಸ್ಸಿಗಾಗುವುದು ಸಹಜ. ಶ್ರೀಗಳವರು ಭಾರತ ಉದ್ಧಾರವಾಗುವ ಬಗೆಯನ್ನೂ ಆಳವಾಗಿ ವಿಚಾರಮಾಡಿದ್ದಾರೆ.

"ವ್ಯಕ್ತಿವ್ಯಕ್ತಿಗಳಲಿ ಮತಮತಂಗಳಲಿ
ಸಂಘ ಸಂಸ್ಥೆಗಳಲಿ ವೈರವಳಿದು ಪ್ರೇಮವುಳಿದು ಬಪ್ಪುದೆ
ನಾಗರಿಕತೆಯ ಪ್ರಗತಿಯು ನೋಡಾ.
ಉಚ್ಚವರ್ಣದವರೆಂದು ಹೆಚ್ಚಿನ ಅಧಿಕಾರಿಗಳೆಂದು

ಸೋಮಾರಿಗಳಾಗದೆ ಸಾಹಂಕಾರಿಗಳಾಗದೆ
ವೃತ್ತಿ ವ್ಯವಸಾಯಗಳಲ್ಲಿ ಸಮಸ್ತರು ಶ್ರಮಿಸುವುದೆ
ನಾಗರಿಕತೆಯ ಪ್ರಗತಿಯು ನೋಡಾ.
ಅಧಿಕಲಾಭದಾಸೆ ಕೈಯಾಸೆಗಳ ಕಳಚಿ
ಸುಳ್ಳು ಕಳ್ಳ ವ್ಯಾಪಾರಗಳ ತ್ಯಜಿಸಿ
ಶಾಂತಿ ಸಹನೆ ಸಹಕಾರ ಸಮಾತಾಭಾವ –
ಶಿಷ್ಟಾಚಾರ ಸಂಪನ್ನರಾಗಿ ಸಚ್ಚರಿತ್ರರಪ್ಪುದೆ ಅದು
ನಿಜನಾಗರಿಕತೆಯ ಪ್ರಗತಿಯು ನೋಡಾ.
ಇಂತೀ ತ್ರಿವಿಧ ಆಚರಣಗಳೆ ನಾಗರಿಕನ ನಿಜರೀತಿ ನೋಡಾ,
ಸಹಜ ಪ್ರಗತಿ ನೋಡಾ."

"ಅಹಿಂಸೆಯೇ ಜೀವನ. ಸತ್ಯವೆ ದರ್ಶನ.
ಸೋದರತೆಯೇ ಶಿಕ್ಷಣ.
ಇಂತಿವು ಮಾನವ ಲಕ್ಷ್ಯವಪ್ಪಡೆ
ವಿಶ್ವದ ಅಶಾಂತಿ ಕಾಷ್ಠಕ್ಕೆ ಕಿಚ್ಚೇಕೆ ಹೇಳಾ."

ಶ್ರೀಗಳವರು ತಮ್ಮ ಜೀವನಸಿದ್ಧಾಂತ, ಸತ್ಯದರ್ಶನವನ್ನು ಒಂದು ದಿವ್ಯವಚನದಲ್ಲಿ ಅಡಗಿಸಿದ್ದಾರೆ.

"ವಿಶ್ವವೆ ಮನೆ. ವಿಶ್ವೇಶ್ವರನೆ ತಂದೆ.
ವಿಶ್ವೇಶ್ವರಿಯೆ ತಾಯಿ.
ವಿಶ್ವದ ಮಾನವರೆಲ್ಲ ಮಕ್ಕಳು ಕಂಡಯ್ಯ.
ಬಣ್ಣ – ಭಾಷೆ – ಧರ್ಮ – ಕರ್ಮ,
ದಿಕ್ಕು – ದೇಶಗಳಾಪಾದಡೇನು ?
ಮಾನವ್ಯ ಬಾಂಧವ್ಯವೆ ವಿಶ್ವೈಕ್ಯದ ಜೀವಾಳ ಕಂಡಯ್ಯ.
ಶ್ರೀ ಸಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ."

ಶ್ರೀಗಳವರ ದಿವ್ಯಸಂದೇಶ ಎಲ್ಲರ ಹೃದಯದಲ್ಲಿಯೂ ಸುವರ್ಣಾಕ್ಷರಗಳಲ್ಲಿ ಉಲ್ಲಿಖಿತವಾಗಬೇಕು.

ಶ್ರೀ ಶ್ರೀಗಳವರ 'ವಚನಮಂಜರಿ' ಒಬ್ಬ ಸತ್ಯಶೋಧಕನೂ, ಲೋಕ ಕಲ್ಯಾಣರತನೂ, ಪುರೋಗಾಮಿಯೂ ಆದ ಸಾಧಕನ ದಿವ್ಯ ಚರಿತ್ರೆ, ಅವರ ನುಡಿಗಳಲ್ಲಿ ಸಿಡಿಲಿನ ಹೊಡೆತವಿದೆ, ಮಿಂಚಿನ ಪ್ರಕಾಶವಿದೆ, ತಾಯಿಯ ಪವಿತ್ರಪ್ರೇಮದ ಅಮೃತವರ್ಷವೂ ಇದೆ. ಹಿರಿಯ ಗುರು ಪೀಠದಿಂದ ಶ್ರೀಗಳವರು ಅಧಿಕಾರವಾಣಿಯಿಂದ ದಿವ್ಯೋಪದೇಶ ಮಾಡಿದ್ದಾರೆ - ಅದಕ್ಕೂ ಹೆಚ್ಚಾಗಿ ಆಡಿದುದನ್ನು ಮಾಡಿ ತೋರಿಸು ತ್ತಿದ್ದಾರೆ." †

---

† 'ವಚನಮಂಜರಿ' ಗ್ರಂಥಕ್ಕೆ ನಾನು ಬರೆದಿರುವ ಮುನ್ನುಡಿಯಿಂದ.

## ೭. ಮುಪ್ಪಿನ ಷಡಕ್ಷರಿ

ಕನ್ನಡ ಕಾವ್ಯಾಕಾಶದಲ್ಲಿ ಬೆಳಗಿ ಸಮಕಾಲೀನರ ಮೇಲೆ ಪ್ರಭಾವ ಮೂಡಿದವರು ಕೆಲವರು; ಸರ್ವಕಾಲೀನರ ಮೇಲೆ ಪ್ರಭಾವಮೂಡಿದವರು ಕೆಲವರು; – ಸರ್ವದೇಶಗಳ ಸರ್ವಕಾಲೀನರ ಮೇಲೆ ಪ್ರಭಾವ ಮೂಡ ಬಲ್ಲವರು ಕೆಲವರು. ಪ್ರಾಚೀನ ಕನ್ನಡ ಕವಿಗಳ ಸಾಹಿತ್ಯದ ಶಕ್ತಿ ಸೌಂದರ್ಯವನ್ನು ಪರಿಗಣಿಸುವಾಗ, ಅವುಗಳಿಂದ, ಆಯಾ ಕವಿಗಳು ಅನುವರ್ತಿಸಿದ ಧರ್ಮವನ್ನು – ಅದರ ಪ್ರಕ್ರಿಯೆಗಳನ್ನು ಕಳಚಿದರೆ ಉಳಿಯುವುದೇನು ಎಂದು ವಿಚಾರಮಾಡಬೇಕು. ಧರ್ಮದ ಕಟ್ಟಿಗೆ, ಮತ ಪ್ರಕ್ರಿಯೆಗಳ ವಜ್ರಬಂಧಕ್ಕೆ ಸಿಲುಕದೆ ವಿಶ್ವತೋಮುಖವೂ, ವಿಶ್ವರೂಪವೂ, ವಿಶ್ವಪರಿಗ್ರಾಹ್ಯವೂ ಆದ ಕಾವ್ಯವನ್ನು ಸಿರಬಲ್ಲವನನ್ನು ನಾವು 'ಮಹಾಕವಿ' ಎಂದು ಕರೆಯುತ್ತೇವೆ. ಷೇಕ್ಸಪಿಯರ್, ಷೆಲ್ಲಿ, ಗಯಟೆ, ದಾಂತೆ, ಹಾಫೀಸ್, ಸಂಗ್ ಫೋ, ಕಾಳಿದಾಸ, ಭವಭೂತಿ, ಪಂಪ, ಜನ್ನ, ಹರಿಹರ, ಸರ್ವಜ್ಞ, ಕುಮಾರವ್ಯಾಸರನ್ನು ಈ ಮಾನದಿಂದ ಅಳೆಯಬಹುದು.

ಮಹಾಕವಿಗೂ ಮೇಲಂತಸ್ತಿನಲ್ಲಿ ನಿಲ್ಲುವವರು 'ಋಷಿಕವಿ'ಗಳು. ಅವರ ಕೃತಿ ನಿತ್ಯ ನೂತನ; ಸತ್ಯ ಸನಾತನ. ಅವರ ತಪಃಪ್ರಭಾವ ದಿಂದೊಗೆದ ಕೃತಿಗಳಿಂದ ಲೋಕೋದ್ಧಾರವಾಗುತ್ತದೆ. ಪುರುಷ ಪುರುಷೋತ್ತಮನಾಗುತ್ತಾನೆ; ಸ್ತ್ರೀ ಸ್ತ್ರೀರತ್ನವಾಗುತ್ತಾಳೆ. ಅಂಥವರ ವರ್ಗ ಅಸಂಖ್ಯಾತವಲ್ಲ. ಹೋಮರ್, ಹಜರತ್ ಝೂಮಿ, ಲೋಟ್ಸೆ, ವಾಲ್ಮೀಕಿ, ವ್ಯಾಸ, ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರಿ ಇವರನ್ನು ಈ ಸಂಜ್ಞೆಗೆ ಸೇರಿಸಬಹುದು.

ಮುಪ್ಪಿನ ಷಡಕ್ಷರಿ ತನ್ನ ತಪಸ್ಸಿನಿಂದ ಕನ್ನಡವನ್ನು ಉದ್ಧಾರ ಮಾಡಿದ ಮಹಾಪುರುಷ. ಆತನ ಕಾವ್ಯದ ಅಮೃತ ಸರಸ್ಸಿನಲ್ಲಿ ಯಾವ

ಜನಾಂಗದವರು ಬೇಕಾದರೂ ಮಿಂದು ಪುನೀತರಾಗಬಹುದು. ತಮ್ಮ ರಾಗ ದ್ವೇಷಗಳನ್ನು, ಲೋಭಮೋಹಗಳನ್ನು, ಕುಹಕ ಕೊಂಕುಗಳನ್ನು ನೀಗಿ ಕೊಂಡು ಮಾನವಪುಂಗವರಾಗಬಹುದು. ಆವನ ಸರ್ವಸಮತಾಭಾವ, ಸಮರಸ ದೃಷ್ಟಿ, ನಿಸ್ಸೀಮ ಮಾನವ ಪ್ರೇಮ, ಅವ್ಯಾಜ ಅಂತಃಕರಣ ಅನ್ಯಾದೃಶವಾಗಿವೆ. 'ಬೆಲೆಯಿಂದಕ್ಕುಮೆ ಕೃತಿ, ಗಾವಿಲ ಭುವನದ ಭಾಗ್ಯ ದಿಂದ ಮಕ್ಕುಂ' ಎಂದು ನೇಮಿಚಂದ್ರ ಹೇಳಿದುದು ಇಂಥವರ ವಿಷಯ ವಾಗಿಯೆ; ಇಂಥವರ ಕೃತಿಗಳ ವಿಷಯವಾಗಿಯೆ.

ಮುಪ್ಪಿನ ಷಡಕ್ಷರಿಯ ಜೀವನದ ಬಗ್ಗೆ ನಮಗೆ ಯಾವ ವಿಷಯವೂ ತಿಳಿದುಬರುವುದಿಲ್ಲ. ಇವನು ನಿಜಗುಣಶಿವಯೋಗಿಯ ಸಮಕಾಲೀನನೆಂದು ಒಂದು ವಾದವಿತ್ತು. ಇವನ ಕಾಲ ೧೫ನೆಯ ಶತಮಾನವೆಂದು ಎಲ್ಲರೂ ಒಪ್ಪಿಕೊಂಡಿದ್ದಾರೆ. ಆದರೆ ನಿಜಗುಣನ ಕಾಲ ೧೩ನೆಯ ಶತಮಾನವೆಂದು ಕೆಲವರೂ, ಹನ್ನೊಂದನೆಯ ಶತಮಾನವೆಂದು ಕೆಲವರೂ ವಾದಮಾಡು ತ್ತಿದ್ದಾರೆ. ಮುಪ್ಪಿನ ಷಡಕ್ಷರಿ ನಿಜಗುಣ ಶಿವಯೋಗಿಯ ಸಮಕಾಲೀನ ನಾಗಿರದೆ ತರುವಾಯದವನಾಗಿರಬೇಕೆಂದು ತೋರುತ್ತದೆ.

ಮುಪ್ಪಿನ ಷಡಕ್ಷರಿ ಹೆಚ್ಚು ಗ್ರಂಥಗಳನ್ನು ಬರೆದಂತೆ ಕಾಣುವುದಿಲ್ಲ. ಆವನದಾಗಿ ನಮಗೆ ಸಿಕ್ಕುವುದೆಲ್ಲಾ ಕೆಲವು ಹಾಡುಗಬ್ಬಗಳು. ಅವುಗಳನ್ನು ಶ್ರೀ ನಿಡುಮಾಮಿಡಿ ಶ್ರೀಗಳವರು ಸಂಗ್ರಹಿಸಿ, ಪರಿಷ್ಕರಿಸಿದರು. ಶ್ರೀ ಹರ್ಡೇ ಕರ್ ಮಂಜಪ್ಪನವರು (೧೯೪೦ ರಲ್ಲಿ) ಪ್ರಕಟಿಸಿದರು.

ಶ್ರೀಗಳವರು ಬರೆದಿರುವ 'ಮುಪ್ಪಿನಾರ್ಯನ ಭಾವಪಾತ್ರಗಳು' 'ಹೆಮ್ಮೆಗಳು' ಎರಡು ಪ್ರತ್ಯೇಕ ಕಿರು ಹೊತ್ತಗೆಗಳಾಗಿದ್ದರೂ ಎರಡನ್ನೂ ಒಂದೇ ಪುಸ್ತಕವೆಂದು ಪರಿಗಣಿಸಬೇಕು. ಮುಪ್ಪಿನಾರ್ಯನ ಹಾಡುಗಳ ಮೂಲಧ್ವನಿಯನ್ನು ಗ್ರಹಿಸಿ ಅವುಗಳ ಮೇಲೆ ತಮ್ಮ ಭಾವಪಾತ್ರದ ಕಟ್ಟಡ ಕಟ್ಟಿದ್ದಾರೆ. 'ಮುಪ್ಪಿನಾರ್ಯನು ತನ್ನ ಭಾವಪಾತ್ರಗಳನ್ನು ಸಾಜವಾಗಿ ಸರ್ವಾಂಗ ಸುಂದರವಾಗಿ ಚಿತ್ರಿಸುವ ಸಿದ್ಧಹಸ್ತನು. ಪಾತ್ರಗಳ ರೀತಿ ನೀತಿ ಗಳನ್ನು ಪ್ರಚೋದಿಸುವಲ್ಲಿ ಪ್ರತಿಭಾನ್ವಿತನು. ಪ್ರಾರ್ಥಕನ ಮೊದಲ್ಗೊಂಡು ಸೇವಕನವರೆಗೂ ಇರುವ ಪಾತ್ರಗಳ ರೀತಿ ರಸಗಳನ್ನು ಪೋಷಿಸಿ ಹೇಳುವ ಕೌಶಲ್ಯ ಔಚಿತ್ಯಗಳು ಕವಿಗೆ ಕರತಲಾಮಲಕವಾಗಿವೆ. ಪ್ರಾರ್ಥಕನ ಭಾವ

ಶುದ್ಧಿ, ನೆರೆದ ನೀರೆಯ ಹೃದಯಾಸಕ್ತಿ, ತಿರುಕನಿಗಿರಬೇಕಾದ ನಿರಪೇಕ್ಷವೃತ್ತಿ ತೃಪ್ತಿ, ಸೇವಕನಿಗಿರಬೇಕಾದ ಕೈಂಕರ್ಯಭಾವ – ಸ್ವಾತಂತ್ರ್ಯಸೇವೆ, ಸತ್ಯ ಸಾಧನೆ ಮುಂತಾದ ಗುಣಗಳನ್ನು ಮನಂಗೊಳುವಂತೆ ಚಿತ್ರಿಸಿದ ಚಾತುರ್ಯ ಮುಪ್ಪಿನಾರ್ಯರದು. ಕವಿ ಭಾವದಿಂದ ಪರಿಣತನು. ಭಾಷೆಯಲ್ಲಿ ಪರಿಪಕ್ವನು. ಕವಿ ಕೇವಲ ವಯೋವೃದ್ಧನಲ್ಲ, ಭಾವವೃದ್ಧ, ಭಾಷಾವೃದ್ಧ! ತನ್ನ ಜೀವನ ವನ್ನೇ ಭಾವಸಿದ್ಧಿಗಾಗಿ ಭಾಷಾಸೇವೆಗಾಗಿ ಮುಡುಪಿಟ್ಟ ಸತ್ಯವ್ರತಸಿದ್ಧ.' * ಎಂದು ಶ್ರೀಗಳವರು ಹೇಳಿರುವುದು ಸಹಜವಾಗಿದೆ.

'ಕವಿ ಪರಮಾತ್ಮನ ಸೃಷ್ಟಿಯಲ್ಲಿನ ಪ್ರತಿಯೊಂದು ಅಣುವಿನಲ್ಲಿಯೂ ಸೌಂದರ್ಯವನ್ನು ಕಾಣುತ್ತಾನೆ. ಅದನ್ನು ಮನಸ್ಸಿನಲ್ಲಿ ಮೂಡಿಸಿಕೊಂಡು ಭಾವದಲ್ಲಿ ಅನುಭವಿಸುತ್ತಾನೆ. ಆ ಅನುಭವವೆ ಕವಿತೆಯಾಗಿ ಕಲೆಯಾಗಿ ಹೊರಹೊಮ್ಮುತ್ತದೆ. ಇದೊಂದು ಬಗೆ. ಎರಡನೆಯದಾಗಿ ಕವಿ ತನ್ನ ಅಂತ ರಾತ್ಮನ ಸಾಧನೆಯಲ್ಲಿ ತಾನು ಅನುಭವಿಸುವ ಸುಖದುಃಖಗಳನ್ನು ಹೃದಯದ ಉತ್ಕಟತೆ – ನಿಕೃಷ್ಟತೆಗಳನ್ನು ಕಾವ್ಯರೂಪಾಗಿ ತೋಡಿಕೊಳ್ಳುತ್ತಾನೆ. — ಆದರೆ ಆ ಸುಖ – ದುಃಖ, ಆ ಉತ್ಕಟತೆ – ನಿಕೃಷ್ಟತೆ ಮುಂತಾದವು ಗಳೊಡನೆ ತಾದಾತ್ಮ್ಯವನ್ನು ಪಡೆದು, ತದ್ರೂಪತೆಯನ್ನು ತಳೆದು ನಾಟಕೀಯ ವಾಗಿ ಕವಿತ್ವವನ್ನು ಕಟ್ಟುವುದರಲ್ಲಿ ಒಂದು ಹೆಚ್ಚಿನ ಹಾರ್ದಿಕತೆಯಿದೆ – ಹೆಚ್ಚು ಗಾರಿಕೆಯಿದೆ. ಇವನ್ನು ಸಂಪಾದಿಸಿದ್ದಾನೆ ಈ ಮುಪ್ಪಿನ ಷಡಕ್ಷರಿ ಕವಿ!' †

ಆತ್ಮಕ್ರೀಡಾರತನಾದ ಪರಮಯೋಗಿ ಮುಪ್ಪಿನ ಷಡಕ್ಷರಿಯ ಪ್ರಾರ್ಥನೆಯ ಪದ್ಯಗಳು ಅವನ ಸಂಸ್ಕೃತಿಯ ಹೆಜ್ಜೆಗಳನ್ನು ಸಾರಿ ತೋರು ತ್ತಿವೆ. ದೇವನೊಬ್ಬನೇ ಎಂದು ಬಹಳ ಜನ ಹೇಳಿದ್ದಾರೆ. ಆದರೆ ಆ ದೇವ ನನ್ನು ಸಾಧಕ ತನಗೆ ಬೇಕಾದಂತೆ ಕಾಣಬಹುದು — ಬೇಕಾದಲ್ಲಿ ಅರಸ ಬಹುದು ಎಂದು ಒಪ್ಪಿಕೊಳ್ಳುವುದಕ್ಕೆ, ಎಲ್ಲರ ಸಾಧನಮಾರ್ಗದಲ್ಲಿಯೂ ವಿಶ್ವಾಸ ಗೌರವವಿಡುವುದಕ್ಕೆ ಹೆಚ್ಚಿನ ಆತ್ಮಸಂಸ್ಕೃತಿಬೇಕು.

---

* 'ಮುಪ್ಪಿನಾರ್ಯರ ಭಾವ ಪಾತ್ರಗಳು' – ಪುಟ ೫೨.

† 'ಮುಪ್ಪಿನಾರ್ಯರ ಭಾವ ಪಾತ್ರಗಳು' – ಪುಟ ೬.

'ಅವರವರ ದರುಶನಕೆ । ಅವರವರ ವೇಷದಲಿ ।
ಅವರವರಿಗೆಲ್ಲ ಗುರು ನೀನೊಬ್ಬನೆ ॥
ಅವರವರ ಭಾವಕ್ಕೆ । ಅವರವರ ಪೂಜೆಗಂ ।
ಅವರವರಿಗೆಲ್ಲ ದೇವ ನೀನೊಬ್ಬನೆ ॥ '

ಆತ್ಮಸ್ಥನಾದ ಭಗವಂತನನ್ನು ಹಲವು ಹನ್ನೊಂದು ಕಡೆ ಹುಡುಕುವು ದೇಕೆ.

'ಮಲಹರನ ನೆನಹು ತಾ । ನೆಲಸಿರಲು ಮನದೊಳಗೆ
ಹಲವನರಸುವದೇನು ತಾನೆ ಶಿವನು ॥ '

ಅನಲ್ ಹಖ್ – ಅಹಂಬ್ರಹ್ಮಾಸ್ಮಿ – ತಾನೆ ಶಿವನು !!

ಮುಪ್ಪಿನ ಷಡಕ್ಷರಿಯ ಮಾನಸಿಕ ಉತ್ಕ್ರಾಂತಿಗೆ ನಿಜಗುಣ ಶಿವ ಯೋಗಿ† ಮತ್ತು ಅಲ್ಲಮ ಪ್ರಭುವಿನ ದಿವ್ಯಸಂದೇಶ ಬಹುಮಟ್ಟಿಗೆ ಸಹಾಯ ಮಾಡಿರಬೇಕು. ವಿಚಾರದೃಷ್ಟಿಯಿಂದ ಅವನು ಇತರ ಶರಣರಿಗಿಂತಲೂ ಅಲ್ಲಮ ಪ್ರಭುವಿಗೆ ಹೆಚ್ಚು ಸಮೀಪಗತನಾಗಿದ್ದಾನೆ.

'ಎನ್ನ ಕಾಯವು ನಿನಗೆ ।
ಉನ್ನತಾಲಯವಾಯಿ — ।
ತಿನ್ನೆನಗೆ ಭಯವುಂಟೆ ಎಲೆ ಲಿಂಗವೆ ॥ ಪ ॥

ಎನ್ನ ಕಾಲುಗಳೆರಡು । ಉನ್ನತದ ಕಂಭವ್ಹೈ ।
ಎನ್ನ ಒಡಲೇ ನಿಮಗೆ ದೇವಾಲಯ ॥

---

† 'ಷಟ್‌ಶಾಸ್ತ್ರ ಕರ್ತರಾದ ನಿಜಗುಣರು ಕವಿಯ ಸಮಕಾಲೀನರು. ಆದರೆ ಅವರ ಸಾಹಿತ್ಯ ಸಂಪತ್ತಿಯೇ ಬೇರೆ; ಕವಿಯ ಸಾಹಿತ್ಯ ಸಂಪತ್ತಿಯೇ ಬೇರೆ. ನಿಜಗುಣರ ಮನದಪ್ರವೃತ್ತಿಯೇ ಬೇರೆ ಕವಿಯ ಮನದ ಪ್ರವೃತ್ತಿಯೇ ಬೇರೆ. ಅವರದು ಪ್ರೌಢ, ಕವಿಯದು ಸುಕುಮಾರ. ಅವರದು ಶ್ರೌತಮಾರ್ಗ, ಕವಿಯದು ಶರಣಮಾರ್ಗ. ಅವರು ವೇದಾಂತ ಕೇಸರಿ, ಕವಿ ಸಿದ್ಧಾಂತ ಕೇಸರಿ ' — ಮುಪ್ಪಿನಾರ್ಯರ ಭಾವ ಪಾತ್ರಗಳು – ಪುಟ ೫೩. ಶ್ರೀಗಳವರು ವ್ಯಕ್ತಮಾಡಿರುವಷ್ಟು ವಿಭೇದ, ವೈವಿಧ್ಯ ನಿಜಗುಣ, ಮುಪ್ಪಿನ ಷಡಕ್ಷರಿಗಳಲ್ಲಿದೆಯೆಂದು ನಾನು ತಿಳಿದಿಲ್ಲ. ಮುಪ್ಪಿನ ಷಡಕ್ಷರಿಯ ಮೇಲೆ ನಿಜಗುಣರ ಪ್ರಭಾವಮುದ್ರೆ ಚೆನ್ನಾಗಿ ಬಿದ್ದಿದೆ. ಅವನಿಗೂ ನಿಜಗುಣರಷ್ಟೇ ವೇದಾಂತ ಪರಿಶ್ರಮವಿರಬೇಕೆಂದು ನನಗನಿಸುತ್ತದೆ.

ಎನ್ನ ತೋಳುಗಳೆರಡು । ಉನ್ನತದ ಮದನಕ್ಕೆ ।
ಎನ್ನ ಶಿರ ಸೌವರ್ಣ ಕಲಶವಯ್ಯ ॥ ೧ ॥

ಎನ್ನ ಕಿವಿ ಕೀರ್ತಿಮುಖ । ಎನ್ನ ನಾಲಗೆ ಘಂಟೆ ।
ಎನ್ನ ನಯನಗಳೆರಡು ಜೋಡಿ ನಿಮಗೆ ॥
ಎನ್ನ ಮುಖವೇ ದ್ವಾರ - । ವೆನ್ನ ದಂತವೆ ಅದಕೆ ।
ಮಿನ್ನುತಿಹ ಮೌಕ್ತಿಕದ ಸೂಸಕಗಳು ॥ ೨ ॥

ಎನ್ನಧರ ಜವಳಿಗದ । ಎನ್ನ ನಾಸಾಪುಟವು ।
ನನ್ನಿಯಿಂ ಸೌರಭ್ಯರಸ ಘಟಿತವು ॥
ಚನ್ನಾಗಿ ಬೀಸುವ । ಹೊನ್ನ ಚಾಳೇಂದ್ರ ವೈ ।
ಇನ್ನುಳ್ಳ ಉಪಕರಣವೆಂತೆಂದೆನೆ ॥ ೩ ॥

ಎನ್ನ ಸಮತೆಯೆ ಜಲವು । ಎನ್ನ ಸದ್ಗುಣ ಗಂಧ ।
ಎನ್ನ ನಿತ್ಯತ್ವವೆ ಅಕ್ಷತೆಗಳು ॥
ಎನ್ನ ಜ್ಞಾನವೆ ಪುಷ್ಪ । ಎನ್ನ ಭಕ್ತಿಯೆ ಬೋನ ।
ಎನ್ನ ಮನವೆ ನಿಮಗೆ ಪೂಜಾರಿಯು ॥ ೪ ॥

ಇಂತಪ್ಪ ಪೂಜೆಯನು । ಸಂತಸದಿ ಕೈಕೊಳುತ ।
ಕಂತುಹರ ಶಿವ ಷಡಕ್ಷರಿ ಲಿಂಗವು ॥
ಮುಂತೆ ಎನ್ನೊಳಗೆ ನಿ । ಶ್ಚಿಂತನಾಗಿರುತಿರಲು ।
ಚಿಂತೆಯುಂಟೇ ಹಲವು ಭವಭೀತಿಯ ॥ ೫ ॥

ಭಗವದ್ಭಕ್ತಿಯುಂಟಾಗಬೇಕಾದರೆ ಮಾನವನಿಗೆ ತನ್ನ ಮನಸ್ಸಿನ ಮೇಲೆ ಪೂರ್ಣ ಪ್ರಭುತ್ವ ಬರಬೇಕೆಂಬುದು ಮುಪ್ಪಿನ ಷಡಕ್ಷರಿಯ ಅಭಿಮತ. ಮನಸ್ಸೆಂಬ ಮರ್ಕಟವನ್ನು ಹತೋಟಿಯಲ್ಲಿಟ್ಟುಕೊಂಡ ಹೊರತೂ ಸಾಧಕ ಏನನ್ನೂ ಸಾಧಿಸಲಾಗುವುದಿಲ್ಲ.

'ಕರಿಯ ಹಿಡಿದು ನಿಲ್ಲಿಸಬಹುದು
ಕರಡಿಯನು ಕಟ್ಟಬಹುದು
ಮೊರೆವ ಫಣಿಯ ಹೆಡೆಯ ಕೈಯೊಳಿರಿಸಬಹುದಲ್ಲೆ ॥
ಕಿರಿಯ ಮನವ ಹಿಡಿದು ತಂದು
ಇರಿಸಿ ಲಿಂಗದಲ್ಲಿ ನೆರೆವ
ಹಿರಿಯರುಗಳ ಕಾಣೆ ಬರಿಯ ಬಲ್ಮೆ ನುಡಿವರು ॥

ಮುನ್ನ ತಾನು ಯಾರು ಎಂದು
ತನ್ನ ನಿಜವ ನರಿದ ಬಳಿಕ
ಚನ್ನ ಷಡಕ್ಷರಿಯ ಲಿಂಗ ತಾನೆಯಾಗಿಹ ||
ಇನ್ನು ಸರ್ವ ಜಗವದೆಲ್ಲ
ತನ್ನ ನಿಲುವೆಯಾಗಿ ತಾಗಿ
ಅನ್ಯವಿಲ್ಲವಾಗಿ ಮನವು ತಾನೆ ನಿಲುವುದು ||'

'ತನ್ನ ತಾನರಿತರೆ ತನ್ನರಿವೇಗುರು' ಎಂಬ ಮತಕ್ಕೆ ಮುಪ್ಪಿನಾರ್ಯ ಸೇರಿದವನು.

ಎಲ್ಲರಿಗೂ ಸುಪರಿಚಿತವಾದ 'ತಿರುಕ'ನ ಕಥೆಗೆ ಮುಪ್ಪಿನಾರ್ಯ ಆಧ್ಯಾತ್ಮಿಕ ಸ್ವರೂಪಕೊಟ್ಟಿದ್ದಾನೆ. ಕನಸಿನಲ್ಲಿ ರಾಜ್ಯವೈಭವವನ್ನನುಭವಿಸಿದ ತಿರುಕನಿಗೆ ಎಚ್ಚರವಾಗಲು ಊರಿನಲ್ಲಿ ಭಿಕ್ಷೆ ಬೇಡುವುದೂ ಅವನಿಗೆ ದುಸ್ಸಾಧ್ಯವಾಯಿತು.

'ಸಿರಿಯು ಕನಸಿನಂತೆಯೆಂದು
ಅರಿದು ಷಡಕ್ಷರಿಯ ಲಿಂಗ
ಹರುಷದಿಂದ ಭಜಿಸು ನಿತ್ಯಸುಖವು ತಪ್ಪದು ||'

ಎಂದು ಮುಪ್ಪಿನಾರ್ಯ ನೀತಿ ಹೇಳುತ್ತಾನೆ.

'ಸೇವಕ' ಭಾವದಲ್ಲಿ ಮುಪ್ಪಿನ ಷಡಕ್ಷರಿ ಭಗವಂತನನ್ನು ಆರಾಧಿಸಿದ್ದಾನೆ. ಶಿವನಿಗೆ, ಅವನ ಶರಣರಿಗೆ ಮಾತ್ರ ಭಕ್ತ ಸೇವಕ. ಈ ಕಿಂಕರತ್ವದಿಂದಲೇ ಅವನು ಶಂಕರತ್ವ ಪಡೆಯುತ್ತಾನೆ.

ಈ ಬಗೆಯ ನಿರ್ಮಲ ಕಿಂಕರತ್ವ ಸೇವಕನ ಮನಸ್ಸಿನಲ್ಲಿ ಯಾವ ಬಗೆಯ ಉತ್ಕ್ರಾಂತಿಯನ್ನುಂಟುಮಾಡುತ್ತದೆಂಬುದನ್ನು ಮುಪ್ಪಿನ ಷಡಕ್ಷರಿ ಸೊಗಸಾಗಿ ನಿರೂಪಿಸಿದ್ದಾನೆ.

"ಎನಗೆ ಭೋಗಭಾಗ್ಯ ಬೇಡ
ಎನಗೆ ಜಪವು ತಪವು ಬೇಡ
ಎನಗೆ ನಿಮ್ಮ ತೊತ್ತು ಸೇವೆ ನಿತ್ಯವಾಗಲ್ಕೆ || ಪ ||

ಎನ್ನ ಕಂದಿಸುತ್ತ ಬಹಳ
ಎನ್ನ ಬಾಧಿಸುತ್ತ ಬಿಡದೆ
ಎನ್ನನೊಂದು ನೆವಗಳಿಂದ ಕಾಡಿದವರಿಗೆ ।
ಎನ್ನ ಕೊಂದೊಡವರಿಗೆಲ್ಲ
ಎನ್ನ ಪೂಜೆ ಫಲಗಳೆಲ್ಲ
ಉನ್ನತದೊಳಗವರಿಗಾಗಿ ಸುಖದಿ ಬಾಳಲಿ ॥ ೧ ॥

ಹಿಂದೆಯೆನ್ನ ಬೈದವರಿಗೆ
ಮುಂದೆಯೆನ್ನ ಬೈದವರಿಗೆ
ಕುಂದದೆಲ್ಲ ಜನರ ನಡುವೆ ಬೈದಡವರಿಗೆ ।
ಇಂದುಧರನ ಕರುಣದಿಂದೆ
ಅಂದಣವನು ಏರುವಂತೆ
ಕುಂದದೊಲವು ಅವರಿಗೆಲ್ಲ ಭೋಗಪಾಗಲಿ ॥ ೨ ॥

ಹಿಂಗದೆನ್ನ ನಿಂದಿಸಿದ ಜ—
ನಂಗಳೆಲ್ಲ ಸುಖದೊಳಿರುವ
ಹಾಂಗೆ ಶಿವನು ಅವರಿಗೆಲ್ಲ ಭಾಗ್ಯವೀಯಲಿ ।
ಮಂಗಳಾತ್ಮ ಷಡಕ್ಷರಿಯು
ಲಿಂಗ ನಿನ್ನ ತೊತ್ತು ಸೇವೆ
ಸಾಂಗವಾಗಿ ಎನಗೆ ಬಿಡದೆ ನಿತ್ಯವಾಗಲಿ ॥ ೩ ॥

ಮುಪ್ಪಿನ ಷಡಕ್ಷರಿ ಋಷಿಕವಿಯೆನ್ನುವದಕ್ಕೆ ಈ ಪದ್ಯವೊಂದೇ ಸಾಕು.

'ಹೆಮ್ಮಗಳು' ಗ್ರಂಥದಲ್ಲಿ ಬರುವ ನೆರೆದ ನೀರೆ ಲಿಂಗಾಂಗ ಸಾಮರಸ್ಯಕ್ಕೆಳಸುವ ಶರಣಸತಿ. ಲಿಂಗಪತಿಯನ್ನು ಅವಳು ಅರ್ತಿಯಿಂದ ಅರ್ಚಿಸುವುದು, ಪೂಜಿಸುವುದು, ಓಲೈಸುವುದು, ಒಲಿಸಿಕೊಳ್ಳುವುದು, ಮುನಿಸುವುದು ಮಾನಿಸುವುದು ಎಲ್ಲ ಭಾವಗಳನ್ನೂ ಶ್ರೀಗಳವರು ಮಾರ್ಮಿಕವಾಗಿ ರಸವತ್ತಾಗಿ ಚಿತ್ರಿಸಿದ್ದಾರೆ. ಶ್ರೀಗಳವರು ಹೇಳುವಂತೆ 'ನೆರದ ನೀರೆ ಆಗುವದೆಂದರೆ ಬರೀ ಮೈನೆರೆದು ಬಂದರೆ ಸಾಲದು. ಮನ ನೆರದು ಬರಬೇಕು. ಭಕ್ತಿ ಬಲಿತು ಬರಬೇಕು. ಭಾವ ಬೆರದು ಬರಬೇಕು. ಆಗ 'ನೆರದ ನೀರೆ'ಯ ಪಾತ್ರ ಪರಿಪೂರ್ಣವಾಗುತ್ತದೆ. ಪರಮಾತ್ಮ ಪ್ರೀತ್ಯಾಸ್ಪದನಾಗುತ್ತಾನೆ. ಕವಿ

ಆ ಸ್ಥಿತಿಯನ್ನು ಅಳವಡಿಸಿಕೊಂಡಿದ್ದಾನೆ, ಕೃತಾರ್ಥನಾಗಿದ್ದಾನೆ. ಕವಿ ಹರನ ಹೃದಯವನು ದ್ರವಿಸಿದ ಹೆಮ್ಮಗಳು, ಹೃದಯ ಸೌಂದರ್ಯ ವುಳ್ಳವಳು.' *

ಮುಪ್ಪಿನ ಷಡಕ್ಷರಿಯ ಒಂದೊಂದು ಮಾತೂ ಮೂಸೆಯಿಂದೊಗೆದ ಅಪರಂಜಿ. ತನ್ನ ಮಹೋನ್ನತ ತಪಸ್ಸಿನಿಂದ ಕನ್ನಡ ಜನರ ಬಾಳುವೆ ಯನ್ನು ತಿದ್ದಿ, ಅವರ ವಿಚಾರಲಹರಿಗೆ ಭದ್ರವಾದ ಆಧ್ಯಾತ್ಮಿಕ ಬುನಾದಿ ಯನ್ನು ಹಾಕಿಕೊಟ್ಟ ಈ ಋಷಿಕವಿಯ ಮೇಲೆ ಶ್ರೀಗಳವರು ಎರಡು ಗ್ರಂಥ ಗಳನ್ನು ಬರೆದು ಕನ್ನಡಿಗರಿಗೆ ಮಹೋಪಕಾರ ಮಾಡಿದ್ದಾರೆ.

---

* 'ಹೆಮ್ಮಗಳು' – ಪುಟ ೪೫

## ೮. ಶ್ರೀ ಪಂಡಿತಾರಾಧ್ಯ ಪೀಠದ ಇಬ್ಬರು ಗುರುಗಳು

ತಮ್ಮ ಹಿರಿಯ ಪರಂಪರೆಗೆ ಸೇರಿದ್ದ ಇಬ್ಬರು ಪೂರ್ವಗುರುಗಳ ಜೀವನ ವಸ್ತುವನ್ನು ಆಳವಡಿಸಿಕೊಂಡು, ಶ್ರೀಗಳವರು 'ಗುರುವಿನ ಗೆಲುವು' — 'ಇಮ್ಮಡಿ ಕರಿಬಸವೇಂದ್ರರ ಒಸಗೆ' ಎಂಬೆರಡು ಕಿರುಹೊತ್ತಗೆಗಳನ್ನು ರಚಿಸಿದ್ದಾರೆ.

'ಗುರುವಿನ ಗೆಲುವು' ೧೬ನೆಯ ಶತಮಾನದ ಪೂರ್ವಾರ್ಧದಲ್ಲಿ ಪೀಠಾರೋಹಣಮಾಡಿದ ಜಗದ್ಗುರು ಶ್ರೀ ಕರಿಬಸವ ದೇಶಿಕೇಂದ್ರರನ್ನು ಕುರಿತ ನಾಟಕ. ಪೀಠದ ಪರಮ ಶಿಷ್ಯನಾದ ಹಂಡೆ ಅನಂತಪುರದ ದೊರೆ ಪವಾಡಪ್ಪ ನಾಯಕನಿಗೆ ದೊಡ್ಡ ಕುತ್ತು ಒದಗುತ್ತದೆ. ಕಡಪಾ ನವಾಬನ ಕಡೆಯ ಸರದಾರರು ಪೊಗದಿ ವಸೂಲು ಮಾಡುವ ವ್ಯಾಜದಲ್ಲಿ ಹಂಡೇ ಅನಂತಪುರವನ್ನು ಮುತ್ತಿ ರಾಜನನ್ನು ಕೈಸೆರೆ ಹಿಡಿದಿರುತ್ತಾರೆ. ಪವಾಡಪ್ಪ ನಾಯಕನ ಮಂತ್ರಿ ರಾಮಾಜಿಯೂ ಈ ಒಳಸಂಚಿನಲ್ಲಿ ಸೇರಿಕೊಂಡಿದ್ದಾನೆ. ದೂತನಿಂದ ಈ ಘೋರ ಸುದ್ದಿ ಶ್ರೀಗಳವರಿಗೆ ಮುಟ್ಟಲು ಅವರು ಬುಕ್ಕಪಟ್ಟಣ ಹೊಸಕೆರೆಯ ರೈತರನ್ನು ಹುರಿದುಂಬಿಸಿ ಅವರ ಸಹಾಯದಿಂದ ಪವಾಡಪ್ಪ ನಾಯಕನನ್ನು ಬಂಧವಿಮುಕ್ತನನ್ನಾಗಿ ಮಾಡಿ ರಾಜ್ಯವನ್ನು ತುರುಕರ ಧಾಳಿ ಯಿಂದ ರಕ್ಷಿಸುತ್ತಾರೆ.

ಒಣಗಿನಿಂತಿದ್ದ ಮಾಮರವನ್ನು ಬೇಡಿ, ಅದರಿಂದ ಬೇಕಾದ ಆರೋ ಗಣೆಯ ಪದಾರ್ಥಗಳನ್ನು ತರಿಸಿ ವಿಜಯನಗರದ ಅಚ್ಯುತರಾಜನನ್ನು ಶ್ರೀ ಇಮ್ಮಡಿಯ ಕರಿಬಸವೇಂದ್ರರು ಆದರಿಸಿ ಸತ್ಕರಿಸಿದ ವಸ್ತುವೇ 'ಇಮ್ಮಡಿ ಕರಿಬಸವೇಂದ್ರರ ಒಸಗೆ'ಯ ವಸ್ತು.

ಈ ಯೆರಡು ಕೃತಿಗಳೂ ಶ್ರೀಗಳವರ ಪ್ರಾಯೋಗಿಕ ಕಾಲಕ್ಕೆ ಸೇರಿದವು.

---

ಶ್ರೀಗಳವರು ೧೯೩೦ನೆಯ ಇಸವಿಯಲ್ಲಿ ತಮ್ಮ ಅರವತ್ತು ಮೂರನೆಯ ವಯಸ್ಸಿನಲ್ಲಿ ಶಿವೈಕ್ಯರಾದರು.

ಶ್ರೀ ಕುಮಾರಸ್ವಾಮಿಗಳ ಸರ್ವತೋಮುಖ ಚೇತನ, ಸೇವೆಯನ್ನು ಶ್ರೀ ನಿಡುಮಾಮಿಡಿ ಶ್ರೀಗಳವರು ತಮ್ಮ 'ಕಾರಣಿಕ ಕುಮಾರಯೋಗಿ' ಗ್ರಂಥದಲ್ಲಿ ಸಾದ್ಯಂತವಾಗಿ ವಿವರಿಸಿದ್ದಾರೆ. ಶ್ರೀಗಳವರ ಗ್ರಂಥ ಲಲಿತ ಮಧುರವಾಗಿ ಉದ್ದಕ್ಕೂ ಓದಿಸಿಕೊಂಡು ಹೋಗುತ್ತದೆ.

ಸಂದರ್ಭೋಚಿತವಾಗಿ ಶ್ರೀಗಳವರು ತಮ್ಮ ಕಥಾನಾಯಕನನ್ನು ಇತರ ಮಹಾಪುರುಷರಿಗೆ ಹೋಲಿಸಿಕೊಂಡು ಹೋಗಿದ್ದಾರೆ.

"ಕಾರಣಿಕ ಕುಮಾರಯೋಗಿಗಳವರು ಬುದ್ಧ ಬಸವನ ಬಾಳು ಬದುಕಿದರು. ವಿವೇಕಾನಂದರ ವಿಚಾರಕ್ರಾಂತಿ ಮಾಡಿದರು. ಗಾಂಧೀಜಿಯವರ ಜನಜಾಗ್ರತಿಯನೆಸಗಿದರು. ಕವೀಂದ್ರ ರವೀಂದ್ರರ ಶಾಂತಿನಿಕೇತನದಂತೆ ಶಿವಯೋಗ ಮಂದಿರವನ್ನು ಸ್ಥಾಪಿಸಿದರು. ರವೀಂದ್ರರು ಸಾಹಿತ್ಯ ರಚಿಸಿ ವಿಶ್ವಕವಿಗಳಾಗಿದ್ದರೆ ಸ್ವಾಮಿಗಳವರು ಸಾಹಿತ್ಯಸಂಗ್ರಹಿಸಿ ಆತ್ಮಕವಿಗಳಾಗಿದ್ದರು." *

"ಸಿದ್ಧಾರ್ಥನು ಸಂಸಾರವನ್ನು ಅನುಭವಿಸಿ ಸನ್ನಿವೇಶಗಳನ್ನು ಪರಿಣಮಿಸಿ ತನ್ನ ೨೯ನೆಯ ವಯಸ್ಸಿನಲ್ಲಿ ವಿರತನಾಗಿದ್ದರೆ ಸದಾಶಿವಸ್ವಾಮಿಯು ಷೋಡಶಪ್ರಾಯದಲ್ಲಿಯೆ ಸಂಸಾರಕ್ಕೆ ಸಿಕ್ಕುಬೀಳದೆ ವ್ಯಾಮೋಹಕ್ಕೆ ಬಾಯ್ನೀರು ಕರೆಯದೆ ವೀರ ವಿರಾಗಿಗಳಾಗಿ ಹೊರಟಿರುವುದರಲ್ಲಿಯೆ ಅವರ ಮನೋಧೈರ್ಯದ ಮಹತ್ತು - ಸ್ಥಿರಪ್ರಜ್ಞತೆಯ ಸಂಪತ್ತು ಎಷ್ಟಿತ್ತೆಂಬುದನ್ನು ಊಹಿಸಲು ಸಹ ಸಾಧ್ಯವಿಲ್ಲ." †

"ವಿವೇಕಾನಂದರು ಒಬ್ಬ ಅಧ್ಯಾಪಕರ ಮುಖಾಂತರ ರಾಮಕೃಷ್ಣ ಪರಮಹಂಸರನ್ನು ಅರಿತರು. ಸದಾಶಿವಸ್ವಾಮಿಗಳವರಿಗೆ ಮಾತ್ರ ಆರೂಢರನ್ನು ಅರಿಯಲು ಯಾರ ನೆರವೂ ಬೇಕಾಗಲಿಲ್ಲ." ‡

---

* "ಕಾರಣಿಕ ಕುಮಾರಯೋಗಿ" : ನಮ್ಮನುಡಿ — ಪುಟ ೫.

† " " — ಪುಟ ೨೮.

‡ — ಪುಟ ೨೫.

"ವಿವೇಕಾನಂದರು ತಮ್ಮ ಮನೆಯಲ್ಲಿರುವ ಅನ್ನಬಟ್ಟೆಗಳ ಕೊರತೆಯನ್ನು ಗುರು ಮುಖಾಂತರ ಕೇಳಿ ಪಡೆದರು. ನಮ್ಮ ಸದಾಶಿವಸ್ವಾಮಿಗಳವರು ತಮ್ಮ ಕಷ್ಟಾರ್ಜಿತವನ್ನೇ ಕೊಟ್ಟು ಹರಸಿದರು; ಕಷ್ಟ ಹರಿಸಿದರು." *

"ನಿಜಗುಣರ ವೇದಾಂತ ಗ್ರಂಥಗಳಲ್ಲಿಯೆ ಅದರಲ್ಲಿಯು ಕೈವಲ್ಯ ಪದ್ಧತಿಯಲ್ಲಿಯೆ ತಲ್ಲೀನರಾಗಿದ್ದ ಹುಬ್ಬಳ್ಳಿಯ ಸಿದ್ಧಾರೂಢರವರು ಅವರ ಈ ಇಷ್ಟಲಿಂಗದ ಮಹಿಮೆ ಹಿರಿಮೆಗಳ ಹಿತೋಪದೇಶವನ್ನೆ ಲೆಕ್ಕಿಸಿರಲಿಲ್ಲ. ಆತ್ಮಲಿಂಗವಿದ್ದ ಆರೂಢನಿಗೆ ಬಾಹ್ಯಲಿಂಗವೇಕೆ ಎಂದು ಅವರ ಗ್ರಹಿಕೆ. ಆದರೆ ತಮ್ಮ ಗ್ರಹಿಕೆಯಲ್ಲಿ ಗಂಧವಿಲ್ಲವೆಂಬುದು ಅವರಿಗೆ ತಿಳಿದಿರಲಿಲ್ಲ. ಈ ನಿಜವನರಿಯದವ ನಿಜವಾದ ಆರೂಢನಲ್ಲ, ಆರೂಢಪತಿತ. ಈ ತತ್ವವ ತಿಳಿಯದೆ ಸಿದ್ಧಾರೂಢರು ಅವರ ಕೆಲವು ಶಿಷ್ಯರು ಇಷ್ಟಲಿಂಗವನ್ನು ಬಿಟ್ಟು ಬಿಟ್ಟಿದ್ದರು." †

"ವಿವೇಕಾನಂದರು ಪರಮಾತ್ಮನ ಪಿಪಾಸುಗಳಾಗಿ ದಕ್ಷಿಣೇಶ್ವರಕ್ಕೆ ಹೋದರೆ ನಮ್ಮ ಕಥಾನಾಯಕರಲ್ಲಿಗೆ ಶಿವನನ್ನು ಕಂಡ ಸದ್ಗುರುಗಳು ತಾವಾಗಿಯೆ ಆಗಮಿಸಿದರು; ಅನುಗ್ರಹಿಸಿದರು." ‡

"ಬುದ್ಧದೇವನ ವಿರತಿಗೆ ಮೂರು ದೃಶ್ಯಗಳು ಕಾರಣವಾದರೆ ಸ್ವಾಮಿಗಳವರ ವಿರತಿಗೆ ಒಂದೇ ದೃಶ್ಯ ಕಾರಣವಾಯಿತು." ×

"ಪರಮತ ಸಹಿಷ್ಣುತೆಯಲ್ಲಿ ಪೂಜ್ಯಸ್ವಾಮಿಗಳವರು ರಾಮಕೃಷ್ಣ ಪರಮಹಂಸರಂತೆ." ××

---

* "ಕಾರಣಿಕ ಕುಮಾರಯೋಗಿ" — ಪುಟ ೨೭.
† ,, ,, — ಪುಟ ೩೩.
‡ ,, ,, — ಪುಟ ೩೬.
× ,, ,, — ಪುಟ ೧೬೬.
×× ,, ,, — ಪುಟ ೧೭೦.

"ಅವರ (ಶ್ರೀ ಕುಮಾರ ಸ್ವಾಮಿಗಳ) ಉಚ್ಚ ವಿಚಾರಗಳು - ಅಳ ಅನುಭವಗಳು ಗಾಳಿಯ ಅಲೆಗಳಲ್ಲಿ ಬೆರೆದುಹೋದವು. ಭಾಷಣ ಸಂಗ್ರಹ ವಿದ್ದಿದ್ದರೆ ಸ್ವಾಮಿಗಳವರ ಚರಿತ್ರೆ ವಿವೇಕಾನಂದರ ಚರಿತ್ರೆಗಿಂತಲು ಯಾವ ವಿಧದಲ್ಲಿಯೂ ಕಮ್ಮಿಯಾಗಿರುತ್ತಿರಲಿಲ್ಲ." *

"ವಿವೇಕಾನಂದರು ಬುದ್ಧ ನಾನಕ್ ಚೈತನ್ಯ ಕಬೀರ ಮುಂತಾದವರನ್ನ ಅವತಾರಪುರುಷರೆಂದು ಭಾವಿಸುತ್ತಿದ್ದಂತೆ ಕುಮಾರಯೋಗಿಗಳವರು ರೇಣುಕ, ಬಸವ, ಬುದ್ಧ, ತೋಂಟದ ಸಿದ್ಧಲಿಂಗೇಶ್ವರ ಮುಂತಾದ ಪುರಾತನ ಪುಣ್ಯ ಪುರುಷರನ್ನಷ್ಟೆ ಅಲ್ಲದೆ ಸಮಕಾಲೀನರಾದ ಜಡೆಯಸಿದ್ಧರು, ಅಥಣಿ ಶಿವ ಯೋಗಿಗಳು ಮುಂತಾದ ಹಿರಿಯರನ್ನು ಮನ್ನಿಸುತ್ತಿದ್ದರು." †

ತಮ್ಮ ಉತ್ಸಾಹ, ಅಭಿಮಾನದ ಭರದಲ್ಲಿ ಶ್ರೀ ನಿಡುಮಾಮಿಡಿ ಶ್ರೀಗಳ ವರು ಶ್ರೀ ಕುಮಾರಸ್ವಾಮಿಗಳವರನ್ನು ಬುದ್ಧ, ರಾಮಕೃಷ್ಣ, ವಿವೇಕಾನಂದ, ಸಿದ್ಧಾರೂಢರಿಗೆ ಹೋಲಿಸಿ, ಶ್ರೀಗಳವರೇ ಇವರಿಗಿಂತ ದೊಡ್ಡವರೆಂದು ಸ್ಥಾಪಿಸಲು ಪ್ರಯತ್ನಿಸಿದ್ದಾರೆ. ಈ ಬಗೆಯ ಹೋಲಿಕೆ ಅನವಶ್ಯಕ ಘರ್ಷಣೆಗೆ ಕಾರಣವಾಗುತ್ತದಲ್ಲದೆ ಸತ್ಯವನ್ನು ಸ್ಥಾಪಿಸುವುದಿಲ್ಲ. ಬುದ್ಧ, ರಾಮಕೃಷ್ಣ, ವಿವೇಕಾನಂದ (ಯೇಸು ಮತ್ತು ಗಾಂಧೀಜಿ) ಇವರನ್ನು ನೋಡುವ ಕಣ್ಣು ಗಳಿಂದ ಶ್ರೀ ಕುಮಾರ ಸ್ವಾಮಿಗಳನ್ನು ನೋಡಲು ಸಾಧ್ಯವಿಲ್ಲ. ಬುದ್ಧ, ರಾಮಕೃಷ್ಣ, ವಿವೇಕಾನಂದರು ಮಾನವ ಕಲ್ಯಾಣವನ್ನು ಎತ್ತಿ ಹಿಡಿದವರು. ಅವರು ಯಾವ ಮತದ ಕಟ್ಟುಕಟ್ಟಳೆಗೂ ಸೆರೆಯಾಗಲಿಲ್ಲ. ಶ್ರೀ ಕುಮಾರ ಸ್ವಾಮಿಗಳು ವೀರಶೈವ ಸಮಾಜದ ಕಲ್ಯಾಣಕ್ಕಾಗಿ ಹುಟ್ಟಿ, ಅದನ್ನು ಬಹಳ ಯಶಸ್ವಿಯಾಗಿ ಸಾಧಿಸಿದ ಮಹಾನುಭಾವರು.

ಶ್ರೀಗಳವರು ತಮ್ಮ 'ಕಾರಣಿಕ ಕುಮಾರಯೋಗಿ'ಯಲ್ಲಿ ಅನೇಕ ಸಿದ್ಧಾಂತಗಳನ್ನು ಮಂಡಿಸಿದ್ದಾರೆ; ಅವುಗಳಿಗೆ ಆಧಾರವಿಲ್ಲ. ಶ್ರೀ ಕುಮಾರ ಸ್ವಾಮಿಗಳಿಗೆ ಎಲ್ಲ ಗುಣಗಳನ್ನೂ ಆರೋಪಿಸಿದ್ದಾರೆ. ಶ್ರೀಗಳವರ ಗ್ರಂಥದಲ್ಲಿ

---

* "ಕಾರಣಿಕ ಕುಮಾರಯೋಗಿ" — ಪುಟ ೨೦೨.
† ,, ,, — ಪುಟ ೨೦೪.

ಮೂಡಿರುವುದು ಭಕ್ತಿಯ ಮನೋಭಾವವೇ ವಿನಾ, ವೈಜ್ಞಾನಿಕ ಮನೋಭಾವವಲ್ಲ. ಶ್ರೀ ಕುಮಾರಸ್ವಾಮಿಗಳವರಲ್ಲಿ ಇದ್ದ ಗುಣಗಳು, ಅವರು ತಮ್ಮ ಜೀವಮಾನದಲ್ಲಿ ಸಾಧಿಸಿದುದು, ಅವರ ಅನುಭಾವ ಪ್ರವೃತ್ತಿ ಮಹಾನುಭಾವತ್ವದ ಲಕ್ಷಣಗಳಾಗಿವೆ. ಅವು ಎಲ್ಲರಲ್ಲಿಯೂ ಸುಲಭವಾಗಿ ದೊರೆಯುವ ಗುಣಗಳಲ್ಲ. ಅವರಲ್ಲಿದ್ದ ಗುಣಗಳನ್ನಷ್ಟೇ ಶ್ರೀಗಳವರು ಹೇಳಿದ್ದರೆ ಸಾಕಾಗಿತ್ತು.

ಮಹಾನುಭಾವರನ್ನು ಹಿಂದೆ ನೋಡುತ್ತಿದ್ದ ದೃಷ್ಟಿಗೂ ಇಂದು ನೋಡುವ ದೃಷ್ಟಿಗೂ ವಿಶೇಷ ಅಂತರವಿದೆ. ಹಿಂದಿನದು ಪೌರಾಣಿಕ ಮನೋಭಾವ; ಇಂದಿನದು ವೈಜ್ಞಾನಿಕ ಮನೋಭಾವ. ಹಿಂದಿನ ಕಾಲದ ಮಹಾನುಭಾವತ್ವಕ್ಕೆ ಪವಾಡಗಳು ಬೇಕಾಗಿದ್ದವು; ಇಂದಿನ ಕಾಲಕ್ಕೆ ಲೋಕಕಲ್ಯಾಣ, ಬೇಕಾಗಿದೆ. ಹಿಂದಿನ ಮಹಾನುಭಾವರು ಒಂದು ಸಮಾಜವನ್ನು ತಮ್ಮ 'ಸಂಸಾರ'ವೆಂದು ಭಾವಿಸಿದ್ದರೆ ಸಾಕಾಗಿತ್ತು; ಇಂದಿನ ಮಹಾನುಭಾವರು ಇಡಿಯ ಲೋಕವನ್ನು ತಮ್ಮ 'ಸಂಸಾರ'ವೆಂದು ಭಾವಿಸಬೇಕಾಗಿದೆ. ಯಾರ ಮಹಾನುಭಾವತ್ವಕ್ಕೂ ಇಂದಿನವರು ತಮ್ಮ ವಿಚಾರಶೀಲತೆ, ಪ್ರಾಗತಿಕ ಮನೋಭಾವಗಳನ್ನು ಬಲಿದಾನವಾಗಿ ಅರ್ಪಿಸಲು ಸಿದ್ಧರಾಗಿಲ್ಲ.

---

## ೪. ಕೊನೆಯ ಮಾತು

ಶ್ರೀ ನಿಡುಮಾಮಿಡಿ ಶ್ರೀಗಳವರು ಈ ಹನ್ನೆರಡು ವರ್ಷಗಳಲ್ಲಿ ಸಾಧಿಸಿರುವುದು ಸಾಮಾನ್ಯವಾದುದಲ್ಲ. ಸಖರಾಯಪಟ್ಟಣದ ಶ್ರೀ ಸದಾಶಿವ ಶಿವಾಚಾರ್ಯರು "....ಆದರೆ ಇಂದಿನ ಗುರು ಜಂಗಮ ಮೂರ್ತಿಗಳಲ್ಲಿ ಕೆಲವರು ವಿದ್ಯಾವಂತರೂ ಸ್ಥಿರ ಚರ ಆಸ್ತಿವಂತರೂ ಆಗಿದ್ದರೂ ಸಾರ್ವಜನಿಕ ಹಿತಪ್ರದವಾದ ಇಂತಹ ಕನ್ನಡನುಡಿಯ ಪ್ರಗತಿಗಾಗಿ ಪರಿಶ್ರಮಿಸುವುದರ ಕಡೆಗೆ ಅಲ್ಪಸ್ವಲ್ಪವಾದ ಗಮನವನ್ನಾದರೂ ಈಯದೆ ಕೇವಲ ಮಠಮಾನ್ಯದ ಕಾರ್ಯ ನಿರ್ವಹಿಸುವುದರಲ್ಲಿಯೇ ತಮ್ಮ ಇಡೀ ಜೀವನವನ್ನು ಸೂರೆಗೊಡುತ್ತಿರುವುದಕ್ಕಾಗಿ ವಿಷಾದ ಪಡಬೇಕಾಗಿದೆ" ಎಂದು ಬಹಳ ಸೌಮ್ಯವಾಗಿ ಹೇಳಿದ್ದಾರೆ. ಮಠಗಳ ಮತ್ತು ಮಠಾಧಿಪತಿಗಳ ಪರಿಸ್ಥಿತಿ ಶ್ರೀಗಳವರು ವಿವರಿಸುವುದಕ್ಕಿಂತಲೂ ದುರ್ದೆಶೆಗೆ ಇಳಿದಿದೆ. ಹಿಂದಿನ ಕಾಲದ ಪಾಳೆಯಗಾರರ ಪ್ರಭುತ್ವಕ್ಕೂ ಇಂದಿನ ಕೆಲವು ಮಠಾಧಿಪತಿಗಳ ಪ್ರಾಬಲ್ಯಕ್ಕೂ ಏನೂ ವ್ಯತ್ಯಾಸವಿಲ್ಲ. ರಷ್ಯಾದೇಶದಲ್ಲಿಯೂ ಇಂಥ ಪರಿಸ್ಥಿತಿಯೊದಗಿ ಮಹಾಕ್ರಾಂತಿಯಾಯಿತು. ಮಠಾಧಿಪತಿಗಳ ನೀತಿ ನಡೆವಳಿಕೆಗಳನ್ನು ಕಂಡು ಬೇಸತ್ತಿದ್ದ ರಷ್ಯಾದ ಜನತೆ ತಮಗೆ ದೇವರ ಅಗತ್ಯವೇ ಇಲ್ಲವೆಂದೂ ದೇವಾಲಯ, ಮಠಗಳು ಪಾಪಾಗಾರಗಳೆಂದೂ ಸಾರಿದರು. ಈ ಬಗೆಯ ಮಹಾಕ್ರಾಂತಿ ಭಾರತದಲ್ಲಿ ಬಹು ಕ್ಷಿಪ್ರವಾಗಿ ಬರುವುದಕ್ಕೆ ನಮ್ಮ ಮಠಾಧಿಪತಿಗಳು ಸ್ವಾಗತ ಗೀತೆ ಹಾಡುತ್ತಿರುವುದು ನಮಗೆ ಕೇಳಿಬರುತ್ತಿದೆ.

ಆದರೆ ತಮ್ಮ ಕರ್ತವ್ಯ, ಹೊಣೆಗಾರಿಕೆಯನ್ನರಿತ ಶ್ರೀ ನಿಡುಮಾಮಿಡಿ ಶ್ರೀಗಳಂಥ ಕೆಲವು ಮಠಾಧಿಪತಿಗಳು ಇರುವುದರಿಂದ ರಷ್ಯಾದ ಘೋರ ಪರಿಸ್ಥಿತಿ ಪ್ರಾಯಶಃ ಭಾರತವರ್ಷಕ್ಕೆ ಬರಲಾರದು.

ಧರ್ಮ ಯಾರ ಗುತ್ತಿಗೆಯೂ ಆಗಬಾರದು ; ಯಾರ ಶಂಖದಿಂದ ಇಳಿದುಬಂದ ತೀರ್ಥವೂ ಆಗಬಾರದು. ಅಂತರ್ಯಾಮಿ ಯಾವ ಸತ್ಯ ಪ್ರೇರಣೆ

ಯನ್ನುಂಟುಮಾಡಿ, ಋಜು ಬದುಕಿನಲ್ಲಿ ಮಾನವನನ್ನು ನಡಸಿಕೊಳ್ಳುತ್ತಾನೆಯೋ ಅದೇ ಧರ್ಮ. ತನ್ನ ಅಂತರಂಗದಲ್ಲಿ ಹುದುಗಿರುವ ಈಶ್ವರಾಂಶವನ್ನು ಯಾವನು ಗ್ರಹಿಸುತ್ತಾನೋ ಅವನು ಧರ್ಮಿ. ಧರ್ಮದ ಜತೆಯಲ್ಲಿ ಅಧರ್ಮದ ಮಾತು ಹೇಳಬಾರದು. ನಾಲ್ಕುಜನ ಬಂದು ಗುಡ್ಡ ಹತ್ತಲಾರಂಭಿಸಿದರೆ, ಕಟ್ಟಾಳುವಾದೊಬ್ಬ ಮೊದಲು ಹೋಗುತ್ತಾನೆ; ದುರ್ಬಲನಾದವನು ಸ್ವಲ್ಪ ತಡವಾಗಿ ಬರುತ್ತಾನೆ. ತಡವಾಗಿ ಬರುವವನು ನಿಷ್ಪ್ರಯೋಜನಕನಲ್ಲ. ಇಂದು ಧರ್ಮಾಧರ್ಮಗಳ ಮಾತು ಬಹಳ ಬೆಳಸಿ, ಲೋಕದಲ್ಲಿ ಅನೈಕಮತ್ಯ, ಅಸಹನೆ, ಅಸಂತೋಷ ಬೆಳಸುತ್ತಿರುವವರು ಧರ್ಮಗಳ ಗುತ್ತಿಗೆ ಹಿಡಿದಿರುವ ಮಠಾಧಿಪತಿಗಳು, ಸ್ವಾಮಿಗಳು, ಅರ್ಚಕರು, ಪುರೋಹಿತರು, ಪಾದ್ರಿಗಳು, ಮುಲ್ಲಾಗಳು. ನಮಗೆ ಬೇಕಾದುದು ಸ್ವಾಮಿ, ಪಾದ್ರಿ, ಪುರೋಹಿತನ ಧರ್ಮವಲ್ಲ. ಭಗವಂತನ ಧರ್ಮ. ಆ ಧರ್ಮ ಎಲ್ಲರಿಗೂ ಒಂದೇ ಆದದ್ದು. ಅದನ್ನು ಕುರಿತೇ ಉಪನಿಷದ್ಕಾರ 'ಏಕಂ ಸತ್' ಎಂದು ಹೇಳಿದ್ದು. ಅದನ್ನು ಕುರಿತೇ ಮನ್‌ಸೂರ್, 'ಅನಲ್ ಹಖ್' ಎಂದು ಹೇಳಿದ್ದು, ಅದನ್ನು ಕುರಿತೇ ಭಗವಾನ್ ಯೇಸು 'ನಾನೂ ನನ್ನ ತಂದೆಯೂ ಒಂದೇ' ಎಂದು ಹೇಳಿದ್ದು.

'ವಿಶ್ವಧರ್ಮ'ವೆನ್ನುವುದು ಪ್ರತ್ಯೇಕವಾದ ಒಂದು ಧರ್ಮವಲ್ಲ. ಎಲ್ಲ ಧರ್ಮಗಳೂ ಒಂದು ದೃಷ್ಟಿಯಲ್ಲಿ ವಿಶ್ವಧರ್ಮಗಳೇ. ಎಲ್ಲ ಧರ್ಮಗಳೂ ಮಾನವತೆಯ ಕಲ್ಯಾಣಾಕಾಂಕ್ಷೆಯಿಂದಲೇ ಹೊರಟವು. ಕೆಲವು ಅದನ್ನು ಸಾಧಿಸಿದವು; ಕೆಲವು ಸಂಕುಚಿತ ಸಮಾಜವ್ಯೂಹಕ್ಕೆ ಸಿಕ್ಕಿ ತೊಳಲಾಡತೊಡಗಿದವು.

ವೀರಶೈವ ಧರ್ಮಕ್ಕೆ ವಿಶ್ವಧರ್ಮದ ಸ್ಥಾನಕೊಡಲು ಪ್ರಯತ್ನಿಸುತ್ತಿರುವ ಸಾಧಕರಲ್ಲಿ ಶ್ರೀ ನಿಡುಮಾಮಿಡಿ ಶ್ರೀಗಳವರು ಒಬ್ಬರಾಗಿದ್ದಾರೆ. ಅವರ ಮನಸ್ಸು, ಮಾತು, ನಡೆ ಪರಿಶುದ್ಧವಾಗಿವೆ. ಕೇವಲ ಉಪದೇಶದಿಂದಲ್ಲ; ಸ್ವಯಂ ಆಚರಣೆಯಿಂದ ಜನರ ಬಾಳನ್ನು ತಿದ್ದಲು ಶ್ರೀಗಳವರು ಸತತವಾಗಿ ಪರಿಶ್ರಮಿಸುತ್ತಿದ್ದಾರೆ.

ಕನ್ನಡ ಸಾಹಿತ್ಯ ಸೇವೆಯನ್ನು ಶ್ರೀಗಳವರು ತುಂಬಿದ ಮನಸ್ಸು, ಚೇತನದಿಂದ ಮಾಡುತ್ತಿದ್ದಾರೆ. ತಮ್ಮದೇ ಆದ ಕಾವ್ಯಮಯ ಗದ್ಯಶೈಲಿಯನ್ನು ರೂಪಿಸಿಕೊಳ್ಳುತ್ತಿದ್ದಾರೆ. ಮುಪ್ಪಿನಷಡಕ್ಷರಿಯಂಥ ಮಹಾನುಭವಿಯ ಸುಧಾಸಾರವನ್ನು ಕನ್ನಡ ಜನಕ್ಕೆ ಸುಲಭವಾಗಿ, ಮಧುರವಾಗಿ ಮನಮುಟ್ಟುವಂತೆ ಹೇಳಬಲ್ಲ ಶಕ್ತಿ ಸಾಧಾರಣವಾದುದಲ್ಲ. ಶಬ್ದಗುಂಜಾರವಕ್ಕೆ ಒಮ್ಮೊಮ್ಮೆ ಶ್ರೀಗಳವರ ಕವಿಸೋತರೂ ಧೃತಿಗೆಡುವುದಿಲ್ಲ.

ಕನ್ನಡ ಸಾಹಿತಿಗಳ ಬಗ್ಗೆ ಶ್ರೀಗಳವರಿಗಿರುವ ನಿರ್ವ್ಯಾಜ ಪ್ರೇಮ, ಅಂತಃಕರಣ ಅನ್ಯಾದೃಶವಾಗಿದೆ. ಕನ್ನಡ ಸಾರಸ್ವತ ಸಂಸಾರದೊಳಗಿರುವ ಅನೇಕ ಸಾಹಿತಿಗಳಿಂದ ತಮ್ಮ ಗ್ರಂಥಗಳಿಗೆ ಮುನ್ನುಡಿ ಬರೆಸಿದ್ದಾರೆ, ಆದರಿಸಿದ್ದಾರೆ. 'ವಚನಮಂಜರಿ'ಯಲ್ಲಿ ಕನ್ನಡ ಸಾಹಿತ್ಯ, ಸಾಹಿತಿಗಳ ಬಗ್ಗೆ ಅವರು ಆಡಿರುವ ಮಾತುಗಳು ಅವರ ತುಂಬಿದ, ಪರಿಶುದ್ಧ ಮನಸ್ಸಿನ ಪ್ರತೀಕಗಳಾಗಿವೆ.

ಶ್ರೀಗಳವರು ಕೈಗೊಂಡಿರುವ ಸಾಹಿತ್ಯ, ಧರ್ಮ ಸೇವೆ ಸತತವಾಗಿ ಸಾಗಲಿ. ವಿಶ್ವೇಶ್ವರ ಅವರಿಗೆ ತನ್ನ ದಿವ್ಯ ಕಳೆಯನ್ನು ಕರುಣಿಸಲಿ. ಶ್ರೀಗಳವರು ಹೀಗೆಯೇ ನೂರಾರು ಗ್ರಂಥಗಳನ್ನು ಬರೆದು ಕನ್ನಡಿಗರ ಹಸಿವನ್ನು ಹಿಂಗಿಸಲಿ.

## ೧. ಅನುಬಂಧ

### ಶ್ರೀ ನಿಡುಮಾಮಿಡಿ ಶ್ರೀಗಳವರ ಗ್ರಂಥಗಳು

೧೯೩೮ :

ಅಕ್ಕನ ಲಾವಣಿ.

೧೯೩೯ ;

ಅಕ್ಕನ ಬಾಳು.

ಯೋಗಾಂಗ ತ್ರಿವಿಧಿ.

೧೯೪೩ :

ಆಯ್ದಕ್ಕಿ ಮಾರಯ್ಯ.

ಮಹಾದೇವಿಯಮ್ಮನ ವಚನಗಳು.

೧೯೪೬ :

ಗುರುವಿನ ಗೆಲುವು.

೧೯೪೭ :

ಸೀಳ್ನುಡಿ.

೧೯೪೮ :

ಇಮ್ಮಡಿ ಕರಿಬಸವೇಂದ್ರರ ಒಸಗೆ.

ಹೆಮ್ಮೆಗಳು.

ಮುಪ್ಪಿನಾರ್ಯರ ಭಾವಪಾತ್ರಗಳು.

೧೯೪೯ :

ವಚನಾಂಜಲಿ.

ಸಮ್ಯಜ್ಞಾನಿ ಚನ್ನಬಸವಣ್ಣ.

ಕನ್ನಡ ಸಾಹಿತ್ಯ ಸೇವೆಯನ್ನು ಶ್ರೀಗಳವರು ತುಂಬಿದ ಮನಸ್ಸು ಚೇತನದಿಂದ ಮಾಡುತ್ತಿದ್ದಾರೆ. ತಮ್ಮದೇ ಆದ ಕಾವ್ಯಮಯ ಗದ್ಯಶೈಲಿ ಯನ್ನು ರೂಪಿಸಿಕೊಳ್ಳುತ್ತಿದ್ದಾರೆ. ಮುಪ್ಪಿನಷಡಕ್ಷರಿಯಂಥ ಮಹಾನುಭವರ ಸುಧಾಸಾರವನ್ನು ಕನ್ನಡ ಜನಕ್ಕೆ ಸುಲಭವಾಗಿ, ಮಧುರವಾಗಿ ಮನಮುಟ್ಟು ವಂತೆ ಹೇಳಬಲ್ಲ ಶಕ್ತಿ ಸಾಧಾರಣವಾದುದಲ್ಲ. ಶಬ್ದಗುಂಜಾರವಕ್ಕೆ ಒಮ್ಮೊಮ್ಮೆ ಶ್ರೀಗಳವರ ಕಿವಿಸೋತರೂ ಧೃತಿಗೆಡುವುದಿಲ್ಲ.

ಕನ್ನಡ ಸಾಹಿತಿಗಳ ಬಗ್ಗೆ ಶ್ರೀಗಳವರಿಗಿರುವ ನಿರ್ವ್ಯಾಜ ಪ್ರೇಮ, ಅಂತಃಕರಣ ಅನ್ಯಾದೃಶವಾಗಿದೆ. ಕನ್ನಡ ಸಾರಸ್ವತ ಸಂಸಾರದೊಳಗಿರುವ ಅನೇಕ ಸಾಹಿತಿಗಳಿಂದ ತಮ್ಮ ಗ್ರಂಥಗಳಿಗೆ ಮುನ್ನುಡಿ ಬರೆಸಿದ್ದಾರೆ, ಆದರಿ ದ್ದಾರೆ. 'ವಚನಮಂಜರಿ'ಯಲ್ಲಿ ಕನ್ನಡ ಸಾಹಿತ್ಯ, ಸಾಹಿತಿಗಳ ಬಗ್ಗೆ ಅವರು ಆಡಿರುವ ಮಾತುಗಳು ಅವರ ತುಂಬಿದ, ಪರಿಶುದ್ಧ ಮನಸ್ಸಿನ ಪ್ರತೀಕ ಗಳಾಗಿವೆ.

ಶ್ರೀಗಳವರು ಕೈಗೊಂಡಿರುವ ಸಾಹಿತ್ಯ, ಧರ್ಮ ಸೇವೆ ಸತತವಾಗಿ ಸಾಗಲಿ. ವಿಶ್ವೇಶ್ವರ ಅವರಿಗೆ ತನ್ನ ದಿವ್ಯ ಕಳೆಯನ್ನು ಕರುಣಿಸಲಿ. ಶ್ರೀಗಳವರು ಹೀಗೆಯೇ ನೂರಾರು ಗ್ರಂಥಗಳನ್ನು ಬರೆದು ಕನ್ನಡಿಗರ ಹಸಿವನ್ನು ಹಿಂಗಿಸಲಿ.

---

## ೧. ಅನುಬಂಧ

### ಶ್ರೀ ನಿಡುಮಾಮಿಡಿ ಶ್ರೀಗಳವರ ಗ್ರಂಥಗಳು

೧೯೩೮ :

ಅಕ್ಕನ ಲಾವಣಿ.

೧೯೩೯ ;

ಅಕ್ಕನ ಬಾಳು.

ಯೋಗಾಂಗ ತ್ರಿವಿಧಿ.

೧೯೪೩ :

ಆಯ್ದಕ್ಕಿ ಮಾರಯ್ಯ.

ಮಹಾದೇವಿಯಮ್ಮನ ವಚನಗಳು.

೧೯೪೬ :

ಗುರುವಿನ ಗೆಲುವು.

೧೯೪೭ :

ಸೀಳ್ನುಡಿ.

೧೯೪೮ :

ಇಮ್ಮಡಿ ಕರಿಬಸವೇಂದ್ರರ ಒಸಗೆ.

ಹೆಮ್ಮೆಗಳು.

ಮುಪ್ಪಿನಾರ್ಯರ ಭಾವಪಾತ್ರಗಳು.

೧೯೪೯ :

ವಚನಾಂಜಲಿ.

ಸಮ್ಯಜ್ಞಾನಿ ಚನ್ನಬಸವಣ್ಣ.

೧೯೫೦ :

ಅಣ್ಣನ ಬದುಕು.

೧೯೫೧ :

ವಚನಮಂಜರಿ.
ಮಣಿಕಾಂತಿ.

ಅಚ್ಚಿನಲ್ಲಿ :

ಯೋಗ ಕ್ಷೇಮ.
ಅಲ್ಲಯ್ಯನ ಬೆಳಕು.
ಯೋಗಿರಾಜ ಪ್ರಭುಕುಮಾರ.

---

# ೨. ಅನುಬಂಧ

## ಶ್ರೀಶೈಲ ಪಂಡಿತಾರಾಧ್ಯರ ಮೂಲಪೀಠ

ಈ ಗ್ರಂಥದ ಮೊದಲನೆಯ ಅಧ್ಯಾಯದಲ್ಲಿ ನಿಡುಮಾಮಿಡಿ ಮಠದ ಪೂರ್ವಜರ ಇತಿಹಾಸವನ್ನು ಮಾತ್ರ ಪ್ರಸ್ತಾಪಿಸಲಾಗಿದೆ. ಪಂಡಿತಾರಾಧ್ಯ ಪರಂಪರೆಗೆ ಸೇರಿದ ಈ ಮಠದ ಪೂರ್ವೇತಿಹಾಸ ಪೂರ್ವಕವಿಗಳು ಉಲ್ಲೇಖಿಸಿರುವ ಪೀಠದ ಚರಿತ್ರೆ ಮತ್ತು ಇತರ ಸಾಹಿತ್ಯದಲ್ಲಿ ಸಂದರ್ಭೋಚಿತವಾಗಿ ಬರುವ ವಿಷಯಗಳಿಂದ ತಿಳಿದುಬರುತ್ತದೆ. ಅವುಗಳನ್ನೇ ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ :—

೧. ಶ್ರೀಶೈಲ : ಶೈವಾಗಮಗಳು, ಮಹಾಭಾರತ, ಸ್ಮೃತಿಗಳು ಮತ್ತು ಅವುಗಳನ್ನನುಸರಿಸುವ ಬ್ರಾಹ್ಮಣ ಸಂಕಲ್ಪಗಳಲ್ಲಿ ಶ್ರೀಶೈಲದ ಹೆಸರು ಬರುತ್ತದೆ. ಅತ್ಯಂತ ಪ್ರಾಚೀನಕಾಲದಿಂದಲೂ ಶ್ರೀಶೈಲ ಒಂದು ಮಹಾಕ್ಷೇತ್ರವೆಂದು ಪರಿಗಣಿಸಲ್ಪಡುತ್ತಿದ್ದಿತು.

೨. ಶ್ರೀಶೈಲ ಮಠಗಳು : ಕ್ರಿ. ಶ. ೧ನೆಯ ಶತಮಾನದ ಹೊತ್ತಿಗೆ ಶ್ರೀಶೈಲದ ಮೇಲೆ ಶೈವಮಠವಿತ್ತೆಂದು ಡಾ. ಚಿಲಕೂರಿ ನಾರಾಯಣರಾಯರು ತಮ್ಮ 'ಪಂಡಿತಾರಾಧ್ಯ' ಚರಿತ್ರೆಯ ಪೀಠಿಕೆಯಲ್ಲಿ ಹೇಳಿದ್ದಾರೆ. ಕ್ರಿ. ಶ. ೪೦೫ರಲ್ಲಿ ಭಾರತಯಾತ್ರೆ ಬಂದಿದ್ದ ಚೀನಾಯಾತ್ರಿಕ ಫಾಹಿಯಾನ್ ಇದನ್ನು ಸಮರ್ಥಿಸುತ್ತಾನೆ. ಶ್ರೀಶೈಲದ ಮೇಲೆ ಚಂದ್ರಗುಂಡ, ನಂದ, ಘಂಟಾ, ಮೂಲ, ತೀರ್ಥ, ಸಾರಂಗ, ವಿಭೂತಿ, ರುದ್ರಾಕ್ಷ, ನಂದಿಕೇಶ್ವರ, ವಟಸಿದ್ಧ, ನರಲೋಕ ಸೂರಿಯನ್ ತಿರುಮಠ, ಬಸವಮಠಗಳಿದ್ದಂತೆ ಅನೇಕ ಗ್ರಂಥಗಳಿಂದ ತಿಳಿದುಬರುತ್ತದೆಂದು ಶ್ರೀ ಅಕ್ಕಲಯ್ಯ ದೀಕ್ಷಿತರು (ಶ್ರೀಶೈಲ ಪಂಡಿತಾರಾಧ್ಯ ಮೂಲಪೀಠಮು - ಪುಟ ೩) ಅಭಿಪ್ರಾಯಪಡುತ್ತಾರೆ.

೩. ಶ್ರೀಶೈಲ ಮತ್ತು ನಿಡುಮಾಮಿಡಿ ಮಠ: ಮೂಲಪಂಡಿತಾರಾಧ್ಯರ ವಿಚಾರ ಶೈವಾಗಮಗಳಲ್ಲಿ ಪ್ರಸ್ತಾಪಿಸಲ್ಪಟ್ಟಿದ್ದರೂ ಅವರ ಮೇಲೆ ಬರೆಯಲ್ಪಟ್ಟ ಪ್ರತ್ಯೇಕ ಗ್ರಂಥಗಳು ಉಪಲಬ್ಧವಿಲ್ಲ. ೧೨ನೆಯ ಶತಮಾನದಲ್ಲಿದ್ದ ಆರಾಧ್ಯ ಬ್ರಾಹ್ಮಣ ವಂಶೀಯನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನೇ ಆಚಾರ್ಯ ಪಂಚಕೋಕ್ತ ಪಂಡಿತಾರಾಧ್ಯನೆಂದು 'ಗುರುರಾಜ ಚಾರಿತ್ರ' ಕಾರನಾದ ಸಿದ್ಧನಂಜೇಶನೂ (೧೬೫೦) ಇತರರೂ, ಮಂಚಣ ಪಂಡಿತಾರಾಧ್ಯನೇ ಚತುರಾಚಾರ್ಯರಲ್ಲಿ ಉಕ್ತನಾದ ಪಂಡಿತಾರಾಧ್ಯನೆಂದು ಪರ್ವತೇಶ (೧೬೯೮) ಕವಿಯೂ ಹೇಳಿದ್ದಾರೆ. 'ಪಂಡಿತಾರಾಧ್ಯ ಚರಿತ್ರೆ'ಯ ಕರ್ತೃವಾದ ಪುಲ್ಲಕವಿ (ಕಾಲ ಸುಮಾರು ೧೬-೧೭ನೆಯ ಶತಮಾನ) ವಿರೂಪಾಕ್ಷ ದೇಶಿಕೇಂದ್ರರೆಂಬ ಆಚಾರ್ಯರು ಶ್ರೀಶೈಲ ಭೀಮಲಿಂಗದಿಂದ ಅವತರಿಸಿ ದೇಶಸಂಚಾರಮಾಡುತ್ತಾ ಕಾಶಿಗೆ ದಯೆಮಾಡಿಸಿ ಅಲ್ಲಿ ಪಂಡಿತ ಮಂಡಲಿಯೊಡನೆ ವಾದಮಾಡುವ ಸಂದರ್ಭದಲ್ಲಿ ತಮ್ಮ 'ನಿಜಗುರು ಧ್ಯಾನವ ಮಾಡಿದರು' ಎಂಬುದರಿಂದಲೂ, ಇವರ ಮಹಿಮೆಗೆ ಆಶ್ಚರ್ಯಪಟ್ಟು ಶರಣಾಗತರಾದ ಪಂಡಿತಮಂಡಲಿಗೆ ಲಿಂಗಧಾರಣೆಮಾಡಿ ಅವರಿಗೆ 'ಪಂಡಿತಾರಾಧ್ಯ' ರೆಂಬ ನಿಜಗುರುವಿನ ಹೆಸರನ್ನೇ ಇಟ್ಟು ಆ ವಂಶೀಯರನ್ನೇ ಮುಂದೆ ತಮ್ಮ ಪೀಠಾಧಿಕಾರಕ್ಕೆ ವಿಧಿಸಿ, ಸೂರ್ಯಸಿಂಹಾಸನ'ವೆಂದು ಹೆಸರಿಸಿದುದೂ ಸ್ಪಷ್ಟ ಪಡಿಸಲ್ಪಟ್ಟಿರುತ್ತದೆ.

ಇದರಿಂದ ವಿರೂಪಾಕ್ಷ ದೇಶಿಕೇಂದ್ರರಿಗೆ ಹಿಂದೆ ಪಂಡಿತಾರಾಧ್ಯರೆಂಬ ಆಚಾರ್ಯರು ಇದ್ದಿರಬೇಕೆಂದು ಸ್ಪಷ್ಟವಾಗುವುದಲ್ಲದೆ, ವಿರೂಪಾಕ್ಷ ದೇಶಿಕೇಂದ್ರರು ಅವರ ಶಿಷ್ಯರೆಂಬುದೂ ವ್ಯಕ್ತವಾಗುತ್ತದೆ. ಪುಲ್ಲಕವಿ ತನ್ನ ಗ್ರಂಥಕ್ಕೆ 'ಪಂಡಿತಾರಾಧ್ಯ ಚರಿತ್ರೆ' ಎಂದು ಹೆಸರಿಟ್ಟರೂ ಪಂಡಿತಾರಾಧ್ಯರ ವಿಷಯ ಹೇಳಹೋಗದೆ ಅವರ ಪರಂಪರೆಯ ಶ್ರೀಗಳವರ ವಿಷಯ ಪ್ರಸ್ತಾಪಿಸಿದ್ದಾನೆ. ವಿರೂಪಾಕ್ಷದೇಶಿಕೇಂದ್ರರೂ ಮತ್ತು ಅವರ ತರುವಾಯದವರೂ ಪಂಡಿತಾರಾಧ್ಯ ಪರಂಪರೆಗೆ ಸೇರಿದವರೆನ್ನುವುದಕ್ಕೆ ಈ ಅಂಶವೂ ಪೋಷಕವಾಗಿದೆ. ಪುಲ್ಲಕವಿಯ ಕಥಾಸರಣಿಯನ್ನೇ ಅವನ ತರುವಾಯದವರಾದ ಇಡಗೂರು ರುದ್ರಕವಿ ಮತ್ತು ಅಪ್ಪಪ್ಪಕವಿಗಳು (೧೯ನೆಯ ಶತಮಾನ) ಅನುಸರಿಸಿದ್ದಾರೆ.

ಇದೇ ಅಂಶವನ್ನು ಮಹಾಂತ ದೇಶಿಕೇಂದ್ರರು (೧೯ನೆಯ ಶತಮಾನ) ತಮ್ಮ 'ಶಿವಶರಣವಿಲಾಸ'ದಲ್ಲಿ ಸ್ಪಷ್ಟಪಡಿಸಿದ್ದಾರೆ;

"ಶ್ರೀ ಗಿರಿಕ್ಷೇತ್ರ ಪ್ರದೇಶಕೆ ಪೋಗಿ
ಬೇಗವತರಿಸಿ ದೃಢತರಮಾಗಿ ನಿಶ್ಚಲಭಕ್ತಿ ಯೋಗವ
ಗೈವುತಾಸ್ಥಲದಿ ॥

ಪಂಡಿತಾರಾಧ್ಯರೆನುತಿರ್ಪರ
ಕಂಡು ತದ್ದೀಕ್ಷೋಪದೇಶವ
ಗೊಂಡು ತದ್ವರ ವೀರಶೈವಾಚಾರಧರ್ಮಗಳ ॥

ಪರಿಯ ನರಿದವರಿಂದಲಷ್ಟಾ
ವರಣವಂಗೀಕರಿಸಿ ತದ್ಗುರು
ಕರ ಪಯೋರುಹ ಸಂಭವ ವಿರೂಪಾಕ್ಷದೇಶಿಕನ ॥

ಪರಮಶಿಷ್ಯಾಗ್ರಣಿಯೆನ್ನಿಸಿ
ಮೆರೆಯುತಿಹ ಶಿಶಿಗುಂಡ ದೇಶಿಕ
ವರನಿಗಮಲಾಂಬರಗಳನು ನೇದಿತ್ತು ಮನವರಿದು ॥

ಬೇಸರದೆ ಸೇವಿಸುತ ಮಂತ್ರೋ
ಪಾಸನಾಧ್ಯಯನಿತ ದೇವರ ದಾಸಿಮಾರ್ಯನು ಪಸರಪಡೆದವನಿಂದ
ನುಗ್ರಹವ ॥"

ಈ ಪೀಠದ ಮೂರನೆಯ ಗುರುವರ್ಯರಾದ ಚಂದ್ರಗುಂಡ ದೇಶಿಕೇಂದ್ರರಿಂದ ದೇವರ ದಾಸಿಮಯ್ಯನಿಗೆ ಶಿವದೀಕ್ಷೆಯಾದ ವಿಚಾರವನ್ನೂ ವಿಸ್ತಾರವಾಗಿ ಮಹಾಂತ ದೇಶಿಕೇಂದ್ರರು ತಮ್ಮ ಗ್ರಂಥದಲ್ಲಿ ವರ್ಣಿಸಿದ್ದಾರೆ. ಶ್ರೀ ಫ. ಗು. ಹಳಕಟ್ಟಿಯವರು ತಮ್ಮ 'ದೇವರ ದಾಸಿಮಯ್ಯನ ವಚನಗಳು' ಗ್ರಂಥದ ಪೀಠಿಕೆಯಲ್ಲಿ ಇದನ್ನು ಉಲ್ಲೇಖಿಸಿದ್ದಾರೆ.

ಇದರಿಂದ ಪಂಡಿತಾರಾಧ್ಯರು, ಅವರ ಶಿಷ್ಯರಾದ ವಿರೂಪಾಕ್ಷ ದೇಶಿಕೇಂದ್ರರು, ಅವರ ಶಿಷ್ಯರು ಚಂದ್ರಗುಂಡ ದೇಶಿಕೇಂದ್ರರು ಎಂಬುದು ವ್ಯಕ್ತವಾಗುತ್ತದೆ. ಇವರು ಪಂಡಿತಾರಾಧ್ಯ ಪರಂಪರಾಗತವಾದ ಸೂರ್ಯ ಸಿಂಹಾಸನದ ಅಧಿಪತಿಗಳೆಂಬುದೂ ಮೇಲೆ ಹೇಳಿದ ಕವಿಗಳ ಗ್ರಂಥಗಳಲ್ಲಿ ಉಕ್ತವಾಗಿದೆ.

ಸುಮಾರು ೧೧ನೆಯ ಶತಮಾನದಲ್ಲಿ ಶ್ರೀ ಚಂದ್ರಗುಂಡ ದೇಶಿಕೇಂದ್ರರು ಶ್ರೀಶೈಲವನ್ನು ಬಿಟ್ಟು ದೇಶಸಂಚಾರ ಕೈಗೊಂಡು ಈಗಿನ ಗೂಳೂರು ಪ್ರಾಂತ್ಯದಲ್ಲಿದ್ದ ರಾಜೇಂದ್ರ ಚೋಳನ ಉದ್ಯಾನವನಕ್ಕೆ ಬರುವುದು. ಅಲ್ಲಿ ತೆಂಗಿನಮರ ಭಿಕ್ಷೆ ನೀಡಿದ ಪವಾಡದಿಂದ ಶಿಷ್ಯನಾದ ಚೋಳರಾಜನ ಪ್ರಾರ್ಥನೆ ಯಂತೆ ಅಲ್ಲಿಯೇ ನೆಲಸಿದುದೂ ಕಂಡುಬರುತ್ತದೆ. ಚಂದ್ರಗುಂಡ ದೇಶಿ ಕೇಂದ್ರರು ಶ್ರೀಶೈಲದಲ್ಲಿದ್ದರೆಂಬುದಕ್ಕೆ ಇಂದಿಗೂ ಚಂದ್ರಗುಂಡ ಮಠವು ಶ್ರೀಶೈಲದ ಮೇಲಿರುವುದೇ ಸಾಕ್ಷಿ. (ಶ್ರೀಶೈಲ ಇತಿಹಾಸ - ಪುಟ ೧೧೬) ಚಂದ್ರಗುಂಡ ದೇಶಿಕೇಂದ್ರರು ದೇಶಸಂಚಾರ ಹೊರಟುಬರುವಾಗ ಆತ್ಮಕೂರಿ ನಲ್ಲಿ ಶಿವಾಧೀನರಾದರೆಂದೂ, ಇದುಶಾಖಾ ಮಠವೆಂದೂ ಆ ಇತಿಹಾಸಕಾರರು ಹೇಳಿರುವುದು ನಿರಾಧಾರಾವೆಂಬುದು ಪುಲ್ಲಕವಿ ಮುಂತಾದವರ ಪಂಡಿತಾ ರಾಧ್ಯ ಚರಿತ್ರೆಯಿಂದ ವ್ಯಕ್ತವಾಗುವುದಲ್ಲದೆ ಇಂದಿಗೂ ಗೂಳೂರು ನಿಡುಮಾ ಮಿಡಿ ಪೀಠದಲ್ಲಿ ಚಂದ್ರಗುಂಡ ದೇಶಿಕೇಂದ್ರರ ಗದ್ದುಗೆಯು ವಿರಾಜಿ ಸುತ್ತಿರುವುದು ನಿದರ್ಶನವಾಗಿದೆ.

ಚಂದ್ರಗುಂಡ ದೇಶಿಕೇಂದ್ರರು ತಮ್ಮ ತರುವಾಯ ಇಮ್ಮಡಿ ಕರಿಬಸ ವೇಂದ್ರ ಶಿವಾಚಾರ್ಯರಿಗೆ ಪಟ್ಟಾಭಿಷೇಕ ಮಾಡಿದ ವಿಷಯ ಪುಲ್ಲಕವಿಯ ಪಂಡಿತಾರಾಧ್ಯ ಚರಿತ್ರೆಯಲ್ಲಿ ಸ್ಪಷ್ಟವಾಗಿದೆ, ಅವರು ಅಲ್ಲಿಂದ ಹೊರಟು ಈಗಿನ ಪೆನುಗೊಂಡೆ ಸಮಿಾಪದಲ್ಲಿದ್ದ ಸೋಮಲಾಪುರದ ಸಮೀಪದಲ್ಲಿರುವ ಸುವರ್ಣಮುಖೀ ನದೀತೀರದಲ್ಲಿದ್ದ ರಾಜೋದ್ಯಾನದಲ್ಲಿ ಒಣಮಾವಿನ ಮರ ವನ್ನು ಚಿಗುರಿಸಿ ಫಲವನ್ನು ಭಿಕ್ಷೆಬೇಡಿದ ಮಹಿಮೆಯಿಂದ ಆ ಸ್ಥಳಕ್ಕೆ ನಿಡುಮಾಮಿಡಿಯೆಂದೂ, ಆ ಪೀಠಾಧಿಪತಿಗಳಿಗೆ ನಿಡುಮಾಮಿಡಿ ಕರಿಬಸವ ಸ್ವಾಮಿಗಳೆಂದೂ ಹೆಸರಾಗಿ ಅದೇ ಹೆಸರೇ ಇಂದಿಗೂ ಸುಪ್ರಸಿದ್ಧವಾಗಿರುತ್ತದೆ. ತೆಂಗಿನಮರ ಭಿಕ್ಷೆಬೇಡಿದ ಪವಾಡ ವ್ಯತ್ಯಸ್ತವಾಗಿ ಚನ್ನಬಸವ ಪುರಾಣ ಮತ್ತು ಗುರುರಾಜಚಾರಿತ್ರಗಳಲ್ಲಿ ಉಲ್ಲಿಖಿತವಾಗಿದೆ. ಕರಿಬಸವದೇಶಿಕೇಂದ್ರ ಶಿವಾಚಾರ್ಯರು ಅನೇಕ ವರ್ಷಗಳು ಬದುಕಿ ಕರ್ನಾಟಕದ ಅನೇಕ ಭಾಗ ಗಳಲ್ಲಿ ಸಂಚರಿಸಿ ಮಹಿಮೆಗಳನ್ನು ನಡೆಸಿದರೆಂದು ಗುಲ್ಬರ್ಗಾ ಚವದಾ ಪುರಿ ಹಿರೇಮಠದ ಶ್ರೀ ಶಾಂತವೀರ ಶಿವಾಚಾರ್ಯರಿಂದ ರಚಿತವಾದ

ಶ್ರೀ ಕುಷ್ಟಗಿ ಹಿರೇಮಠದ ಚನ್ನಬಸವಸ್ವಾಮಿಗಳ ಪುರಾಣದಿಂದ ವ್ಯಕ್ತವಾಗುತ್ತದೆ.

ಶ್ರೀಶೈಲ ಪೀಠಕ್ಕೂ, ನಿಡುಮಾಮಿಡಿ ಮಠಾಧಿಪತಿಗಳಿಗೂ ಸಾಕ್ಷಾತ್ ಪರಂಪರಾ ಸಂಬಂಧವಿರುವುದರಿಂದ 'ಪಂಡಿತಾರಾಧ್ಯ ಪರಂಪರಾಗತ ಗಿರಿರಾಜ ಮಣಿಖಚಿತ ಕನಕ ಸೂರ್ಯಸಿಂಹಾಸನಾಧೀಶ್ವರ'–'ಶ್ರೀಶೈಲ ಸಂಸ್ಥಾನ' ಮುಂತಾದ ವಿಶೇಷಣಗಳು ಶ್ರೀ ನಿಡುಮಾಮಿಡಿ ಪೀಠಾಧಿಪತಿಗಳಿಗೆ ಉಚಿತವಾದವೂ ಇತಿಹಾಸ ಪ್ರಸಿದ್ಧವೂ ಆದವುಗಳೆಂದು ಗ್ರಂಥಾಧಾರಗಳಿಂದ ತಿಳಿದುಬರುತ್ತದೆ. ಪುಲ್ಲಕವಿ ಪಂಡಿತಾರಾಧ್ಯ ಚರಿತ್ರೆಯ ಪ್ರಾರಂಭದ ಒಂದು ಪ್ರತಿಯ ಓಲೆ (ತಾಳಪತ್ರ)ಯೊಂದರಲ್ಲಿ "ಶ್ರೀಮನ್ನಿಡುಮಾಮಿಡಿ ಸ್ವಾಮುಲ್ಕು ಅಷ್ಟಾದಶವರ್ಣಂ ಸಾಲುಮೂಲ ದ್ಯಾವರ ದೇಶಮುದ್ರಶೆಟ್ಟಿ ಶ್ಯಾನುಭಾಗಲುಯೆದ್ದುವೇಲ್ಪು ಕಾಪುಕಂಪಟಂ ಕುಂಚಶ್ಯಾಲುಕೋಲು ಸಾದುಕೊಂಡ ಮಲ್ಲಯ್ಯಕೊಂಡ ದ್ಯಾವರಕೊಂಡ ಡಬ್ಬಯ್ಯೇಲು ಕುಲಂ ಯಿದಿ ಪೆನುಗೊಂಡ ಕನಕಪು ರಾಯಸಿಂಹಾಸನಂ ನಿಡುಮಾಮಿಡಿ ಜಂಗಂಮಯ್ಯ ಪಂಡಿತಾರಾಧ್ಯ ಸೂರ್ಯಸಿಂಹಾಸನಾನ್ಕಿನಡಿವಲಯು ಅಚ್ಯುತರಾಯಲು ಶಿಷ್ಯುಲು ಅಗುಟೇಸಾಕ್ಷಿ ಶ್ರೀ ಶ್ರೀ" ಎಂದು ಹೇಳಿರುವದನ್ನು ನೋಡಿದರೆ ನಿಡುಮಾಮಿಡಿ ಪೀಠದ ಪರಂಪರೆಯು ಶ್ರೀಶೈಲ ಪಂಡಿತಾರಾಧ್ಯರ ಮೂಲವಿದ್ದು ಅನೇಕ ಶಾಖಾಮಠಾಧಿಪತಿತ್ವವನ್ನು ಹೊಂದಿರುವ ಸೂರ್ಯಸಿಂಹಾಸನ ಪೀಠವೆಂದು ವ್ಯಕ್ತವಾಗುತ್ತದೆ.

೪. **ಭಿಕ್ಷಾವೃತ್ತಿಮಠ:** (೧) ವೀರಭಿಕ್ಷಾವರ್ತಿ ಎಂಬ ಹೆಸರು ಪುಲ್ಲಕವಿ, ಅಪ್ಪಪ್ಪಕವಿ, ರುದ್ರಕವಿಗಳ ಪಂಡಿತಾರಾಧ್ಯ ಚರಿತ್ರೆಗಳಲ್ಲಿ ಬರುತ್ತದೆ. ಶ್ರೀಶೈಲ ಪ್ರಾಂತ್ಯದ ವೀರಭಿಕ್ಷಾವರ್ತಿ ಎಂಬುವರು ಶ್ರೀ ವಿರೂಪಾಕ್ಷ ದೇಶಿಕೇಂದ್ರರ ಪ್ರಭಾವವನ್ನು ನೋಡಿ ಅಸೂಯೆಯಿಂದ ಅವರನ್ನು ಕೊಲ್ಲಲು ಪ್ರಯತ್ನಿಸಿ ವಿಫಲರಾಗಿ ಅವರಿಂದ ಶಾಪಗ್ರಸ್ತರಾದರೆಂದೂ ತರುವಾಯ ಪಶ್ಚಾತ್ತಾಪದಿಂದ ಅವರ ಶರಣುಹೊಂದಿದರೆಂದೂ ಪುಲ್ಲಕವಿ ಹೇಳುತ್ತಾನೆ. ವೀರಭಿಕ್ಷಾವರ್ತಿ ಭವಿಯಾದ ಪಾಳೆಯಗಾರನಾಗಿದ್ದನೆಂದೂ, ಶ್ರೀ ವಿರೂಪಾಕ್ಷ ದೇಶಿಕೇಂದ್ರರನ್ನು ಕೊಲ್ಲಿಸಲೆತ್ನಿಸಿ ವಿಫಲನಾಗಿ ಅವರಿಗೆ ಶರಣುಹೋಗಿ ಅವರಿಂದ ಲಿಂಗಾಂಗಿಯಾದನೆಂದೂ ಅಪ್ಪಪ್ಪಕವಿ ಹೇಳಿದ್ದಾನೆ.

(೨) ಆಂಧ್ರದ ಪ್ರಸಿದ್ಧಕವಿಯಾದ ಶ್ರೀನಾಥ (೧೫ನೆಯ ಶತಮಾನ) ತನ್ನ 'ಶಿವರಾತ್ರಿ ಮಾಹಾತ್ಮ್ಯ'ದಲ್ಲಿ ಶಾಂತಭಿಕ್ಷಾವರ್ತಿ ಎಂಬುವರ ಹೆಸರನ್ನು ಉಲ್ಲೇಖಿಸುತ್ತಾನೆ. ಅವರ ಜತೆಗೆ 'ಏಕೋರಾಮೇಶ್ವರ ಪಂಡಿತಾರಾಧ್ಯಾದಿ ಚಾತುರ್ವರ್ಣ್ಯಂಬುಲುಗಲ' ಎಂದು ವರ್ಣಿಸಿದ್ದಾನೆ. ಶಾಂತಭಿಕ್ಷಾವರ್ತಿ ಯನ್ನು 'ಯತೀಶ್ವರ'ನೆಂದು ಶ್ರೀನಾಥ ಸಂಬೋಧಿಸಿದರೂ ಅವರು ಪಂಡಿತಾ ರಾಧ್ಯ ಪರಂಪರೆಗೆ ಸೇರಿದವನಲ್ಲ. ಹಾಗೆ ಅವರು ಸೇರಿದವನಾಗಿದ್ದರೆ ಶ್ರೀನಾಥ ಪ್ರತ್ಯೇಕವಾಗಿ ಪಂಡಿತಾರಾಧ್ಯರ ಹೆಸರನ್ನೆತ್ತಿಕೊಳ್ಳುವ ಕಾರಣ ವಿರುತ್ತಿರಲಿಲ್ಲ.

(೩) ಭಿಕ್ಷಾವರ್ತಿ ಸಂಪ್ರದಾಯದವರು ೧೫ನೆಯ ಶತಮಾನದಿಂದ ಈಚೆಗೆ ಮಠಾಧಿಪತಿಗಳಾಗಿರಬಹುದೆಂದು ಡಾ. ಚಿಲಕೂರಿ ನಾರಾಯಣ ರಾಯರು ತಮ್ಮ ಪಂಡಿತಾರಾಧ್ಯ ಚರಿತ್ರೆಯ ಪೀಠಿಕೆ (ಪುಟ ೩೪೩)ಯಲ್ಲಿ ಸ್ಪಷ್ಟಪಡಿಸಿದ್ದಾರೆ.

(೪) ಭಿಕ್ಷಾವರ್ತಿ ಸಂಪ್ರದಾಯವರು ಒಮ್ಮೆ ಪೀಠಾಧಿಪತಿತ್ವವನ್ನು ವಹಿಸಿದ್ದರೂ ಅವರು ಪಂಡಿತಾರಾಧ್ಯ ಪರಂಪರೆಗೆ ಸೇರಿದವರಾಗದೆ ಶ್ರೀ ರೇಣುಕಾಚಾರ್ಯ ಪರಂಪರೆಗೆ ಸೇರಿದವರೆಂದು ಚನ್ನಬಸವ ಪುರಾಣದ

'....................................ಮುಕ್ತಿಮುನಿ
ದೇವರಾಜಾತಭಿಕ್ಷಾವರ್ತಿಯೆಂದೆಂಬ
ದೇವರ್ಗೆ ಪಟ್ಟಮಂ ಕಟ್ಟಿ ಕಾಣ್ಕೆಯನಿತ್ತು ತನ್ನ ವರಶಿಷ್ಯನಾದ ॥
ಕೋವಿದ ದಿಗಂಬರ ಸುಮುಕ್ತಿಮುನಿಯೆಂದೆಂಬ
ದೇವರಂ ಕರೆದು....................................'

ಎಂಬ ಉಲ್ಲೇಖದಿಂದ ರೇಣುಕಾರಾಧ್ಯ ಪರಂಪರೆಗೆ ಸೇರಿದ ಮುಕ್ತಿ ಮುನಿಯಿಂದ ಪಟ್ಟಾಭಿಷಿಕ್ತರಾದ್ದರಿಂದ ಭಿಕ್ಷಾವರ್ತಿ ಪೀಠದವರು ರೇಣು ಕಾಚಾರ್ಯ ಪರಂಪರೆಗೆ ಸೇರಿದವರೆಂದು ಸ್ಪಷ್ಟವಾಗುತ್ತದೆ. ಇದೇ ವಿಷಯ ವನ್ನು ಶ್ರೀ ಫ. ಗು. ಹಳಕಟ್ಟಿಯವರು ತಮ್ಮ ಶಿವಶರಣಚರಿತ್ರೆ – ಭಾಗ ೩ (ಪುಟ ೩೧೫)ರಲ್ಲಿ 'ಬಾಳೇಹಳ್ಳಿಯಲ್ಲಿ ರುದ್ರಮುನಿಯ ಶಿಷ್ಯ ಮುಕ್ತಿಮುನಿಗೆ

ಶಿಷ್ಯನಾದ ದಿಗಂಬರ ಮುಕ್ತಿಮುನಿ, ಆತನ ಶಿಷ್ಯರು ಕುಮಾರ ಚನ್ನಬಸವೇಶ್ವರ, ಅಜಾತ ಭಿಕ್ಷಾವರ್ತಿಗಳು' ಎಂದು ಹೇಳಿರುವುದು ಮೇಲಿನ ಅಂಶವನ್ನು ಸ್ಪಷ್ಟಪಡಿಸುತ್ತದೆ.

(೫) ಭಿಕ್ಷಾವರ್ತಿ ಸಂಪ್ರದಾಯದವರು ಶ್ರೀಶೈಲದಲ್ಲಿ ಮೊದಲಿನಿಂದಲೂ ಪಂಡಿತಾರಾಧ್ಯ ಪೀಠಾಧಿಪತಿಗಳಾಗಿದ್ದ ಪಕ್ಷದಲ್ಲಿ, ಶ್ರೀಶೈಲ, ಆತ್ಮಕೂರುಗಳಿಗೆ ನಿಕಟ ಸಂಬಂಧವಿರುವ ನಂದ್ಯಾಲಪುರದ ಸಿಂಹಾಸನಾಧೀಶ ಕವಿ ಸಿದ್ಧನಂಜೇಶನು ತನ್ನ 'ಗುರುರಾಜ ಚರಿತ್ರೆ'ಯಲ್ಲಿ ಇವರ ವಿಚಾರವನ್ನು ಬರೆಯದೆ ಬಿಡುತ್ತಿರಲಿಲ್ಲ. ಅವನು ತನ್ನ ಗ್ರಂಥದಲ್ಲಿ ಹೇಳಿರುವ ನೂತನ ಪುರಾತನರಲ್ಲಿ ನಿಡುಮಾಮಿಡಿ ಕರಿಬಸವೇಂದ್ರರ ಮಹಿಮೆಯನ್ನು ಹೇಳಿದ್ದಾನೆಯೇ ವಿನಾ ಭಿಕ್ಷಾವರ್ತಿಗಳ ನಾಮ ನಿರ್ದೇಶನ ಕೂಡ ಮಾಡಿರುವುದಿಲ್ಲ.

(೬) ಭಿಕ್ಷಾವರ್ತಿ ಸಂಪ್ರದಾಯದವರು 'ಶ್ರೀಗಿರಿ ಸೂರ್ಯ ಸಿಂಹಾಸನ'ವೆಂಬ ಅಂಕಿತವನ್ನು ಧಾರಾಳವಾಗಿ ಬಳಸಿಕೊಳ್ಳುತ್ತಿದ್ದರೂ, ಅನೇಕಾನೇಕ ವರ್ಷಗಳಿಂದ ನಡೆಯುತ್ತಿರುವ ತಮ್ಮ ಕೋರ್ಟು ವ್ಯವಹಾರಗಳಲ್ಲೆಲ್ಲಿಯೂ ತಾವು ಪಂಡಿತಾರಾಧ್ಯ ಪರಂಪರೆಯವರೆನ್ನುವುದಕ್ಕೆ ಆಧಾರಗಳನ್ನು ಒದಗಿಸಿಲ್ಲ.

(೭) ೧೮೮೬ನೆಯ ಇಸವಿಯಲ್ಲಿ ಮದರಾಸಿನ ಹೈಕೋರ್ಟಿನ ನ್ಯಾಯಾಧೀಶರು ಕೊಟ್ಟಿರುವ ತೀರ್ಪಿನಲ್ಲಿ ಇವರು ಸನ್ಯಾಸಿಗಳಲ್ಲ ಮಲ್ಲಿಕಾರ್ಜುನ ದೇವರ ಅರ್ಚಕರಾದ ಗ್ರಹಸ್ಥಾಶ್ರಮಿಗಳೆಂದೂ ಉಲ್ಲೇಖಿಸಲ್ಪಟ್ಟಿದೆ.

ಈಯೆಲ್ಲ ಕಾರಣಗಳಿಂದ ಶ್ರೀಶೈಲ ಮೂಲ ಪಂಡಿತಾರಾಧ್ಯ ಪೀಠಾಧಿಪತಿಗಳು ಶ್ರೀಶೈಲವನ್ನು ಬಿಟ್ಟು ಚೋಳರಾಜರು, ತರುವಾಯದ ವಿಜಯನಗರದರಸರು, ಆ ತರುವಾಯ ಅನಂತಪುರ ಪಾಳೆಯಗಾರರ ಪ್ರಾರ್ಥನೆಯಂತೆ ಗೂಳೂರು, ನಿಡುಮಾಮಿಡಿಯಲ್ಲಿ ನೆಲಸಿದ ಮೇಲೆ, ಅಲ್ಲಿದ್ದವರೇ ಪೀಠಾಧಿಕಾರಿಗಳೆಂದು ಹೇಳಿಕೊಳ್ಳುವುದಕ್ಕೆ ಮೊದಲು ಮಾಡಿದರೆಂಬುದು ವ್ಯಕ್ತವಾಗುತ್ತದೆ.

---



ಶ್ರೀ ೧೦೮ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ
ಮಹಾಸ್ವಾಮಿಗಳವರು

**ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ**
**ಶ್ರೀ ೧೦೮ ಜಗದ್ಗುರು ಚೆನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ**
**ಮಹಾಸ್ವಾಮಿಗಳವರ**

**೧೨ನೇ ವಾರ್ಷಿಕೋತ್ಸವ ಮಹಾಸಮಾರಂಭ, ಬೆಂಗಳೂರು.**



ಎಡಗಡೆಯಿಂದ (ಆಸನಾರೂಢರಾಗಿ)—(೧) ಶ್ರೀ ಪಟ್ಟಾಧ್ಯಕ್ಷ ಸದಾಶಿವ ಶಿವಾಚಾರ್ಯ ಸ್ವಾಮಿಗಳವರು, ಸಖರಾಯಪಟ್ಟಣ. (೨) ಶ್ರೀ ಜಗದ್ಗುರುಗಳವರು. (೩) ಆಸ್ಥಾನ ವಿದ್ವಾನ್ ಪಂ॥ ಶಿವಕುಮಾರ ಸ್ವಾಮಿಗಳವರು.

ವೇದಿಕೆ ಮೇಲೆ—(೧) ಶ್ರೀ ಎಚ್. ಸಿದ್ದಯ್ಯನವರು (ರೆವಿನ್ಯೂ ಸಚಿವರು). (೨) ಧರ್ಮಕಾರ್ಯಕುಶಲ ಶ್ರೀ ತೂಬಗೆರೆ ಸಂಜಪ್ಪನವರು (ಸ್ವಾಗತ ಸಮಿತಿಅಧ್ಯಕ್ಷರು).

ಶ್ರೀಮನ್ನಿಡುಮಾಮಿಡಿ ಮಣಿಖಚಿತ ಕನಕ
ಸೂರ್ಯಸಿಂಹಾಸನಾಧೀಶ್ವರ
ಶ್ರೀ ೧೦೮ ಜಗದ್ಗುರು ಚೆನ್ನಬಸವರಾಜ ದೇಶಿಕೇಂದ್ರ
ಶಿವಾಚಾರ್ಯ ಮಹಾಸ್ವಾಮಿಗಳವರ
೧೨ನೆಯ ವಾರ್ಷಿಕೋತ್ಸವದ
ಕಾರ್ಯಕಲಾಪಗಳ
ವರದಿ

ಶ್ರೀಗಿರಿರಾಜಮಣಿಖಚಿತ ಕನಕ ಸೂರ್ಯಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರ ಹನ್ನೆರಡನೆ ವಾರ್ಷಿಕೋತ್ಸವ ಮಹಾಸಮಾರಂಭ, ಬೆಂಗಳೂರು

## ಒಸಗೆಯ ಕರೆ

ಪರಮಪೂಜ್ಯರೂ, ಸಾರಸ್ವತ ತಪಸ್ವಿಗಳೂ ಆದ ಶ್ರೀಗಿರಿ ಶ್ರೀನಿಡುಮಾಮಿಡಿ ಜಗದ್ಗುರುಗಳವರು ಶ್ರೀ ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನಾರೋಹಣ ಮಾಡಿ ಹನ್ನೆರಡು ವರುಷಗಳು ತುಂಬಿವೆ. ಈ ಅವಧಿಯಲ್ಲಿ ಮಹಾಸನ್ನಿಧಿಯಿಂದ ಸಂಸ್ಥಾನಕ್ಕೆ ಸಾಹಿತ್ಯಕ್ಕೆ ಸಮಾಜಕ್ಕೆ ಸಂಸ್ಕೃತಿಗೆ ಅಪಾರ ಉಪಕಾರಗಳು ಸನ್ಮಾನ್ಯಸೇವೆಗಳು ಸಲ್ಲಿವೆ.

ಸಂಸ್ಥಾನಪೀಠವು ಮಹಾಸನ್ನಿಧಿಯವರ ಪೀಠಾರೋಹಣಕ್ಕೆ ಮೊದಲು ಎಲ್ಲ ಬಗೆಯಲ್ಲಿ ಕಳೆಕುಂದಿತ್ತು. ಪ್ರಾಚೀನ ವೈಭವ – ಕೀರ್ತಿ ಬೇಕಾದಷ್ಟಿದ್ದರೂ ಒಂದೆರಡು ಶತಮಾನಗಳಿಂದ ಅನೇಕ ಕಾರಣಗಳಿಂದ ಅದಕ್ಕೆ ಮೋಡ ಮುಸಗಿತ್ತು. ಈಗಿನ ಮಹಾಸನ್ನಿಧಿಯವರು ಆಗಮಿಸಿ ಅವಿಶ್ರಾಂತವಾಗಿ ಶ್ರಮಿಸಿ ವಿಷಮವಾತಾವರಣಗಳನ್ನೆಲ್ಲ ಎದುರಿಸಿ ಸಂಸ್ಥಾನದ ಸರ್ವತೋಮುಖವಾದ ಏಳಿಗೆಯನ್ನು ಮಾಡಿ ಇಂದಿನ ಈ ರೂಪಕ್ಕೆ ತಂದುದು ಒಂದು ಮಹತ್ಕಾರ್ಯವಾಗಿದೆ.

ಸಂಸ್ಕೃತಿಯ ಅಡಿಗಲ್ಲು ಸಾಹಿತ್ಯ. ಸ್ವಾನುಭವದ ಸೆಲೆ ಸಾಹಿತ್ಯ – ಎಂಬುದನ್ನು ಮೊದಲು ಮನಸ್ಸಿಗೆ ತಂದುಕೊಂಡು ಆ ದಿಸೆಯಲ್ಲಿ ಶಕ್ತಿಮೀರಿ ಮಹಾಸನ್ನಿಧಿಯವರು ಕೃಷಿಮಾಡಿದುದರ ಫಲವಾಗಿ ಈವಾಗ ೧೮ ಗ್ರಂಥಗಳು ಸಾಹಿತ್ಯರತ್ನಗಳಾಗಿ ಹೊಳೆಯುತ್ತಿವೆ.

ಆಂಧ್ರ, ತಮಿಳು, ಕರ್ನಾಟಕ, ದೇಶಗಳನ್ನು ಸುತ್ತಿ ಸುಳಿದು ಎಲ್ಲ ಸಾಮಾಜಿಕರಿಗೂ ಧರ್ಮ, ನೀತಿ, ವಿದ್ಯೆ, ವಿನಯ – ಮುಂತಾಗಿ ಅನೇಕ ರೀತಿಯಲ್ಲಿ ತಮ್ಮದೇ ಆದ ಚಿತ್ತಾಕರ್ಷಕ ಶೈಲಿಯಲ್ಲಿ ಭಾಷಣಗಳನ್ನು

ಅಪ್ಪಣೆ ಕೊಡಿಸಿ ಎಲ್ಲ ಕೋಮಿನವರ ಆದರಾಭಿಮಾನಗಳಿಗೆ ಭಕ್ತಿ ವಿಶ್ವಾಸ ಗಳಿಗೆ ಪಾತ್ರರಾಗಿದ್ದಾರೆ ಪೂಜ್ಯ ಸನ್ನಿಧಿಯವರು.

ಮೈಸೂರು ಸಂಸ್ಥಾನದಲ್ಲಿ ಮೊತ್ತಮೊದಲಿಗೆ ಅಸ್ಪೃಶ್ಯರಿಗೆ ಮೈಸೂರಿನ ಮಹಾ ಪ್ರಧಾನಿಗಳಾದ, ಶ್ರೀಮಾನ್ ಕೆ. ಚಂಗಲರಾಯರೆಡ್ಡಿಯವರು ಬಿ.ಎ., ಬಿ.ಎಲ್., ಅವರ ಅಧ್ಯಕ್ಷತೆಯಲ್ಲಿ ತಮ್ಮ ಪೀಠದೊಳಗೆ ಪ್ರವೇಶ ಕಲ್ಪಿಸಿ, ಗೋರಿಬಿದನೂರಿನಲ್ಲಿ ಕೋಮುವಾರು ಭಾವನೆಯಿಲ್ಲದೆ ಎಲ್ಲ ಬಡ ವಿದ್ಯಾರ್ಥಿಗಳಿಗೆ ಉಚಿತ ಭೋಜನಾಲಯವೊಂದನ್ನು ಸ್ಥಾಪಿಸಿ, ಅನೇಕ ಕಲಾವಂತರನ್ನು ವಿದ್ಯಾವಂತರನ್ನು ವಾರ್ಷಿಕೋತ್ಸವಗಳಲ್ಲಿ ರಥಸಪ್ತಮಿ ಮಹೋತ್ಸವಗಳಲ್ಲಿ ಆಹ್ವಾನಿಸಿ ಸನ್ಮಾನಿಸಿ ಹೀಗೆ ಬಹುರೀತಿಯಲ್ಲಿ ಸಂಸ್ಕೃತಿ ಪೋಷಣವನ್ನು ಮಹಾಸನ್ನಿಧಿಯವರು ಮಾಡಿದಾರೆ.

ಇಂತಹ ಮಹಾಸನ್ನಿಧಿಯ ಹನ್ನೆರಡನೆ ವಾರ್ಷಿಕೋತ್ಸವವನ್ನು ಮೇಲೆ ಕಂಡ ಮಹಾಕಾರ್ಯಗಳ ಸ್ಮರಣೆಗಾಗಿ ಇದೇ ಖರ ಸಂವತ್ಸರ ಜ್ಯೇಷ್ಠ ಬಹುಳ ನವಮಿ – ದಶಮಿ (೧೯೫೧ನೇ ಜೂನ್ ತಾ॥ ೨೭–೨೮) ದಿನಗಳಲ್ಲಿ ಬೆಂಗಳೂರು ಮಹಾನಗರದಲ್ಲಿ ನೆರವೇರಿಸಲು ನಿರ್ಧರಿಸಿದೆ. ತಾವುಗಳೆಲ್ಲ ಆಗಮಿಸಿ ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಜಗದ್ಗುರುಗಳವರ ಕೃಪೆಗೆ ಪಾತ್ರರಾಗ ಬೇಕೆಂದು ಕೋರುವ,

ಬೆಂಗಳೂರು
25-5-1951.

ವಾರ್ಷಿಕೋತ್ಸವ ಸಮಾರಂಭದ
ಶಿಷ್ಯರು, ಮಹಾಜನರು.

---

ಶ್ರೀ ಗಿರಿರಾಜ ಮಣಿಖಚಿತ ಕನಕ ಸೂರ್ಯಸಿಂಹಾಸನಾಧೀಶ್ವರ

ಶ್ರೀ ಜ. ಪ. ಚೆನ್ನಬಸವರಾಜ ದೇಶಿಕೇಂದ್ರ

ಶಿವಾಚಾರ್ಯ ಮಹಾಸ್ವಾಮಿಗಳವರು

ಶ್ರೀ ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ ಅವರ ಸನ್ನಿಧಿಯಿಂದ

ಶ್ರೀ ನಿಡುಮಾಮಿಡಿ ಶ್ರೀಗಿರಿ ಮಹಾ॥ ॥ಪೀಠದ ಪರಮಶಿಷ್ಯರು, ಪೀಠಾಭಿಮಾನಿಗಳು, ಧರ್ಮಜಿಜ್ಞಾಸುಗಳು, ಸಾಹಿತ್ಯ ಕಲಾಪ್ರೇಮಿಗಳು ಮೊದಲಾದವರಿಗೆ:—

ಶ್ರೀ ನಿಡುಮಾಮಿಡಿ ಶ್ರೀಶೈಲ ಮಹಾ॥ ॥ಪೀಠಾರೋಹಣ ಮಾಡಿ ನಾಳೆ ಜೇಷ್ಠ ಬ॥ ದಶಮಿಗೆ ಹನ್ನೆರಡು ವರುಷಗಳು ತುಂಬುತ್ತವೆ. ಇದರ ಸವಿನೆನಪಿಗಾಗಿ ಪೀಠದ ಪುರಾಣವನ್ನು, ಬೇರೆ ಕೃತಿಗಳನ್ನು ಪ್ರಕಟಿಸುವ ನಿಮಿತ್ತವಾಗಿ ಕನ್ನಡನಾಡಿನ ಪ್ರಧಾನಪಟ್ಟಣವಾದ ಬೆಂಗಳೂರಿನ ಮಹಾ ಜನರು ಈಸಲದ ವಾರ್ಷಿಕೋತ್ಸವವು ಅಲ್ಲಿಯೇ ಆಗಬೇಕೆಂದು ಸಂಕಲ್ಪಿಸಿ ಬಿನ್ನವಿಸಿಕೊಂಡಕಾರಣ ಇದೇ ಖರಸಂವತ್ಸರ ಜ್ಯೇಷ್ಠ ಬಹುಳ ನವಮಿ-ದಶಮಿ ದಿನಗಳಲ್ಲಿ [೧೯೫೧ನೇ ಜೂನ್ ತಾರೀಖು ೨೭-೨೮] ವಾರ್ಷಿಕೋತ್ಸವ ವನ್ನು ನೆರವೇರಿಸಲು ನಿರ್ಧರಿಸಿದೆ.

ಮೇಲ್ಕಂಡ ಆ ಮಿತಿಗೆ ನೀವೆಲ್ಲರೂ ತಪ್ಪದೆ ಬಂದು ಮಹಾಕಾರ್ಯದಲ್ಲಿ ಭಾಗವಹಿಸಿ ಶ್ರೀ ಜಗದ್ಗುರು ಪಂಡಿತಾಚಾರ್ಯರ ಪರಮಕೃಪೆಗೆ ಪಾತ್ರರಾಗ ಬೇಕೆಂದು ಅಪೇಕ್ಷಿಸಲಾಗಿದೆ.

ಗೂಳೂರು
ಬಾಗೇಪಲ್ಲಿ ತಾ॥
ತಾ॥ 25-5-1951

ಇತ್ಯಾಶಿಷಃ
ಶ್ರೀಮನ್ನಿಡುಮಾಮಿಡಿ
ಶ್ರೀಶೈಲ ಸಂಸ್ಥಾನ,

# ಸಂದೇಶಗಳು

1, The Palace,
Mysore
26-6-1951.

ಶ್ರೀಮನ್ನಿಡುಮಾಮಿಡಿ- ಶ್ರೀ ಗಿರಿರಾಜ ಮಣಿ ಖಚಿತ ಕನಕ ಸೂರ್ಯ ಸಿಂಹಾಸನಾಧೀಶ್ವರ ಶ್ರೀ ೧೦೮ ಜಗದ್ಗುರು ಚನ್ನಬಸವ ರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರ ೧೨ನೇ ವಾರ್ಷಿಕೋತ್ಸವ ಸಮಯದಲ್ಲಿ ಶ್ರೀಮನ್ಮಹಾರಾಜ ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಬಿ., ಜಿ.ಸಿ. ಎಸ್. ಐ., ಮಹಾಸ್ವಾಮಿಯವರು ಅನುಗ್ರಹದಿಂದ ದಯಪಾಲಿಸಿರುವ ಸಂದೇಶ.

ಶ್ರೀಮನ್ನಿಡುಮಾಮಿಡಿ ಶ್ರೀ ಗಿರಿರಾಜಮಣಿ ಖಚಿತ ಕನಕ ಸೂರ್ಯ ಸಿಂಹಾಸನಾಧೀಶ್ವರ ಶ್ರೀ ೧೦೮ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಪೀಠಾರೋಹಣಮಾಡಿ ಇದೇ ಖರ ಸಂ|| ಜೇಷ್ಠ ಬಹುಳ ೧೦ ಗುರುವಾರಕ್ಕೆ ಹನ್ನೆರಡು ವರ್ಷಗಳು ತುಂಬುವ ಈ ಶುಭ ಸಮಯದಲ್ಲಿ ನಮಗೆ ಸ್ವಾಮಿಜಿಯವರಲ್ಲಿರುವ ಭಕ್ತಿಯನ್ನು ವ್ಯಕ್ತಪಡಿಸಲು ನಾವು ಅಪೇಕ್ಷಿಸುತ್ತೇವೆ. ಹನ್ನೆರಡು ವರ್ಷಗಳ ಈ ಅವಧಿಯಲ್ಲಿ ಸ್ವಾಮಿಜಿಯವರು ಸಾಕಷ್ಟು ಸಮಾಜ ಮತ್ತು ಸಾಹಿತ್ಯ ಸೇವೆಯನ್ನು ಮಾಡಿ ಯಶೋಭಾಗಿಗಳಾಗಿರುವುದನ್ನು ಕೇಳಿ ಸಂತೋಷಪಡುತ್ತೇವೆ. ಪ್ರಾಚೀನವೂ ಮಹನೀಯವೂ ಆದ ಶ್ರೀಮನ್ನಿಡುಮಾಮಿಡಿ ಶ್ರೀ ಶೈಲ ಪೀಠಾಧಿಪತಿಗಳ ಮಹಿಮಾದರ್ಶವು ಇತೋಪ್ಯತಿಶಯವಾಗಿ ಬೆಳಗಿ ಶ್ರೀ ಗುರುವರ್ಯರಿಂದ ಇನ್ನೂ ಹೆಚ್ಚಿನ ಲೋಕಕಲ್ಯಾಣವುಂಟಾಗಲೆಂದು ಹಾರೈಸುತ್ತೇವೆ.

---

2. CHIEF MINISTER
Mysore.
Ch. 698

Bangalore
25th June 1951.

Sri K. Chengalaraya Reddy thanks the members of the Srimannidumamidi Sreesaila samstan for their Kind invitation to the 12th Anniversary celebrations in Commemoration of "Suryasimhasanarohana" of Sri Jagadguru Chennabasavaraja Desikendra Sivacharya Mahaswamigalu on 27th and 28th June 1951 Conveys his good wishes for the success of the Celebrations.

---

3. ಶ್ರೀಮನ್ನಿರಂಜನ ಪ್ರಭುಸ್ವಾಮಿಗಳು
ಶ್ರೀ ಬೂದಿಸ್ವಾಮಿ ಮಠ,
ಹೊಸಹಳ್ಳಿ, ಗದಗ

ತಾ|| ೨೨-೬-೧೯೫೧

ಶ್ರೀ ಜ. ಪ. ಚೆನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾ ಸ್ವಾಮಿಗಳವರಲ್ಲಿ

೧೨ನೇ ವಾರ್ಷಿಕೋತ್ಸವ ಸಮಾರಂಭದ ಪ್ರಕಟನೆಯ ಪತ್ರಿಕೆಗಳು ತಲುಪಿ ತುಂಬಾ ಸಂತೋಷವಾಯಿತು.

ಇಂತಹ ಕಾರ್ಯವು ಎಲ್ಲ ಮಠಾಧಿಕಾರಿಗಳಿಗೆ ಮಾರ್ಗದರ್ಶಕವಾಗಿದೆ. ಎಲ್ಲರು ಮೆಚ್ಚುವಂತಹುದಾಗಿದೆ. 'ವಾರ್ಷಿಕೋತ್ಸವ ಕಮಿಟಿಯವರು ಹೊರಡಿಸಿರುವ ಪ್ರಕಟನೆಯ ವಿಚಾರವು ಉಚಿತವೂ ಯಥಾರ್ಥವೂ ಆಗಿರುತ್ತದೆ. ಇಷ್ಟೆಲ್ಲ ಕಾಲೋಚಿತವಾಗಿ ಜರುಗುತ್ತಲಿರುವ ಕಾರ್ಯಗಳನ್ನು ಕಂಡು ಎಲ್ಲರಿಗಿಂತಲೂ ನನಗೆ ಆನಂದವಾಗಿದೆ. ಅಲ್ಲಿ ಜರುಗುವ ಕಾರ್ಯಗಳೆಲ್ಲವೂ ಸಾಂಗವಾಗಿಯೂ ಸುಸೂತ್ರವಾಗಿಯೂ ನೆರವೇರಲೆಂದು ಪರಮೇಶ್ವರನನ್ನು ಪ್ರಾರ್ಥಿಸುತ್ತೇನೆ.

4. ಶ್ರೀ ಬಸರಿಗಿಡದ ವೀರಪ್ಪನವರು
ಜಮೀನದಾರರು ೨೫-೬-೧೯೫೦
ಆಯ್. ಬಿ. ಪಿ. ಏಜಂಟರು, ಗದಗ

ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರ ಚರಣ ಸನ್ನಿಧಿಗೆ

ತಮ್ಮ ಸದ್ಭಕ್ತ ವೀರಪ್ಪ ಬಸರಿಗಿಡದ, ಮಾಡುವ ದೀರ್ಘದಂಡ ನಮಸ್ಕಾರಗಳು. ತಮ್ಮ ಶುಭಾಶೀರ್ವಾದ ಪತ್ರ ತಲುಪಿತು. ನಾನು ಉತ್ಸವಕ್ಕೆ ಬರುತ್ತೇನೆಂದು ವಚನಕೊಟ್ಟಿದ್ದೆ. ಅನಾರೋಗ್ಯ ನಿಮಿತ್ತ ಬರಲು ಸಾಧ್ಯವಾಗಲಿಲ್ಲ. ಉತ್ಸವದ ಎಲ್ಲ ಕಾರ್ಯಗಳೂ ಯಶಸ್ವಿಯಾಗಿ ನೆರವೇರಲೆಂದು ಪ್ರಾರ್ಥಿಸುತ್ತೇವೆ.

---

5. ಈಶ್ವರಪ್ಪನವರು
ಭೂಸ್ತ ವರ್ತಕರು, ಗದಗ ತಾ|| ೨೫-೬-೧೯೫೦

ಶ್ರೀ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರ ಪವಿತ್ರ ಶ್ರೀ ಚರಣ ಸನ್ನಿಧಿಗೆ ಶಿರಸಾಷ್ಟಾಂಗ ದಂಡ ಪ್ರಣಾಮಗಳು

ಪೂಜ್ಯರೆ,

ಶ್ರೀ ಗಿರಿರಾಜಮಣಿ ಖಚಿತ ಕನಕ ಸೂರ್ಯಸಿಂಹಾಸನ ಪೀಠವನ್ನು ತಾವು ಅಲಂಕರಿಸಿ ಹನ್ನೆರಡು ವರ್ಷಗಳ ಅವಧಿಯಲ್ಲಿ ಕನ್ನಡ ನಾಡಿನ ಸಾಹಿತ್ಯ ಸಂಸ್ಕೃತಿ ಕಲೆ ಇತ್ಯಾದಿಗಳನ್ನು ಎತ್ತಿ ಹಿಡಿಯುವುದರಲ್ಲಿ ತೋರಿದ ಪ್ರೇಮಕ್ಕಾಗಿ, ಬೆಂಗಳೂರಿನ ಮಹಾ ಭಕ್ತರು ಈ ವಾರ್ಷಿಕೋತ್ಸವವನ್ನು ನೆರವೇರಿಸುತ್ತಿರುವುದು ನಮಗೆ ಅಪಾರ ಆನಂದವಾಗಿದೆ.

ಸಾರಸ್ವತ ತಪಸ್ವಿಗಳೆ,

ಅತ್ಯಂತ ಪುರಾತನ ಭಾರತವು ತನ್ನ ಸರ್ವಶ್ರೇಷ್ಠ ವ್ಯಕ್ತಿತ್ವವನ್ನು ಪ್ರಪಂಚಕ್ಕೆ ಪ್ರಕಟಿಸುವುದರಲ್ಲಿ ಒಂದು ಮಹಾಶಕ್ತಿಯನ್ನು ಕಳಕೊಂಡು

ಕಳೆಗುಂದಿತ್ತು. ಸರ್ವಸಂಗ ಪರಿತ್ಯಾಗಿಗಳಾದ ಅನೇಕ ಮಹನೀಯರ ಆತ್ಮಾರ್ಪಣದ ನಂತರ ಕಳೆದುಹೋದ ರಾಜಕೀಯ ಶಕ್ತಿಯು ದೊರಕಿದೆ. ಆ ಮುಖಾಂತರವಾಗಿ ನಮ್ಮ ರಾಷ್ಟ್ರದ ಇಡಿಯ ಜನಾಂಗದ ವ್ಯಕ್ತಿತ್ವವು ಪ್ರದರ್ಶಿತವಾಗಬೇಕಾಗಿದೆ. ಜನಜೀವನದ ಈ ಸಂಧಿ ಕಾಲದಲ್ಲಿ ಕನ್ನಡ ನಾಡೂ, ವೀರಶೈವ ಜನಾಂಗವೂ, ಕನ್ನಡ ಕುಲಗುರುಗಳೂ ಒಳ್ಳೆ ವೈಶಿಷ್ಟ್ಯಪೂರ್ಣವಾದ ಪಾತ್ರವಹಿಸಿ ಕನ್ನಡದ ಹಿರಿಮೆಯನ್ನು ಪ್ರಪಂಚಕ್ಕೆ ವ್ಯಕ್ತಗೊಳಿಸಬೇಕಾಗಿದೆ. ಈ ಕಾರ್ಯದಲ್ಲಿ ಜಗದ್ಗುರು ಪಂಡಿತಾಚಾರ್ಯರು ತಮ್ಮ ದಿವ್ಯ ಜೀವನಕ್ಕೆ ಬೆಳಕನ್ನು ಆಶೀರ್ವದಿಸಲಿ.

ರಾಷ್ಟ್ರದ ಪುನರ್ರಚನಾ ವಿಚಾರಗಳಲ್ಲಿ ತಾವು ಬಹು ರೀತಿಯಲ್ಲಿ ಪ್ರಗತಿಪರವಾದ ಕ್ರಿಯಾತ್ಮಕ ಸೇವೆ ಮಾಡಿರುವುದನ್ನು ಕನ್ನಡನಾಡು ಅರಿತುಕೊಂಡಿದೆ. ಜಗದ್ಗುರುಗಳವರ ಭವಿಷ್ಯದ್ ಜೀವನದಲ್ಲಿ ಇನ್ನೂ ಹೆಚ್ಚುಹೆಚ್ಚಾದ ಪವಿತ್ರ ಆಶೀರ್ವಾದಗಳು ಕನ್ನಡ ನಾಡಿಗೂ, ವೀರಶೈವ ಜನಾಂಗಕ್ಕೂ ದೊರೆಯಲೆಂದು ಪ್ರಾರ್ಥಿಸುತ್ತೇನೆ. ಜಗದೀಶ್ವರನು ಮಹಾಸನ್ನಿಧಿಯವರಿಗೆ ತುಂಬಿದಾಯುಷ್ಯವನ್ನು ಆರೋಗ್ಯ ಭಾಗ್ಯವನ್ನು ಮೇಲಾಗಿ ಕನ್ನಡ ತಾಯಿಯ 'ದರ್ಶನ'ವನ್ನು ದಯಪಾಲಿಸಲಿ.

---

7. ಬಂಡಾರು ತಮ್ಮಯ್ಯಗಾರು
ಎಸ್ಟೇಟು ಮ್ಯಾನೇಜರ್, ತಾ॥ ೨೪-೬-೧೯೫೦
ಕಿರ್ಲಂಪೂಡಿ, ಗೋದಾವರಿ ಜಿಲ್ಲಾ.

(ತೆಲುಗು)

ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮುಲವಾರಿ ೧೬ವ ವಾರ್ಷಿಕೋತ್ಸವ ಸಮಾರಂಭ ವ್ಯವಸ್ಥಾಪಕುಲಕು,

ವಿಧೇಯುಡು ಬಂಡಾರು ತಮ್ಮಯ್ಯ ವಿನತಿಶತ ಪೂರ್ವಕಮುಗ ಸೊನರ್ಚು ವಿಜ್ಞಾಪನಮು.

ಆರ್ಯವರ್ಯ,

ತೇದಿ॥ ೨೭-೬-೫೧, ೨೮-೬-೫೧ ಬೆಂಗಳೂರುಲೋ ನತಿವೈಭವಮುಗ ಜರುಗನುನ್ನ ಪಯಿ ವಾರ್ಷಿಕೋತ್ಸವಮುನಕು ತಾಮು ದಯತೋ ಪಂಪಿನ ಯಾಹ್ವಾನ ಪಟ್ಟಿಕಯು, ಶ್ರೀ ಸಿಂಹಾಸನ ಸನ್ನಿಧಿನುಂಚಿ ವಚ್ಚಿನ ಯಾದೇಶ ಪಟ್ಟಿಕಯು ನಂದಿನವಿ. ಅನಿವಾರ್ಯಮುಲಗು ಕಾರಣಮುಲಚೇ ವಾರ್ಷಿಕೋತ್ಸವಮುನಕು ಸ್ವಯಮುಗ ವಚ್ಚಿ ಯಂದು ಪಾಲ್ಗೊನಿ ಯಾನಂದಿಂಪ ಜಾಲನಿ ನಾಯಭಾಗ್ಯತಕು, ಅಶಕ್ತಿಕಿ ಮಿಕ್ಕಿಲಿ ಚಿಂತಿಲ್ಲುಚುನ್ನಾನು. ನಾ ಮಿತ್ರುಲು ಶ್ರೀ ಗುತ್ತಿ ಅಕ್ಕುಲಯ್ಯ ದೀಕ್ಷಿತುಲು ಗಾರಿವಲನ ವಿವರಮುಲು ತೆಲಿಯಗಲವು. ಪರಮೇಶ್ವರುಡು, ಶ್ರೀಶೈಲ ಮಲ್ಲಿಕಾರ್ಜುನುಡು ಜಗದ್ಗುರು ಪಂಡಿತಾರಾಧ್ಯುಲು, ಈ ವಾರ್ಷಿಕೋತ್ಸವ ಕಾರ್ಯಕ್ರಮಮುಲನ್ನಿಯು ಜಯಪ್ರದಮುಗಾ ನೆರವೇರನನುಗ್ರಹಿಂತುರು ಗಾವುತಮನಿ ಪ್ರಾರ್ಥಿಂಚುಚುನ್ನಾನು. ಶ್ರೀ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮುಲ ಚರಣಾರವಿಂದಮುಲಕು ನಾ ಪ್ರಣಾಮಶತಮುಲು ನಿವೇದಿಂಪ ಗೋರೆದನು.

———

# ಸ್ವಾಗತಭಾಷಣ



**ಪರಮಪೂಜ್ಯ ಶ್ರೀ ನಿಡುಮಾಮಿಡಿ ಶ್ರೀ ಶೈಲ ಜಗದ್ಗುರು ಮಹಾ ಸ್ವಾಮಿಗಳವರ ೧೨ನೇ ವಾರ್ಷಿಕೋತ್ಸವ ಸಮಾರಂಭದಲ್ಲಿ (ತಾ॥ ೨೭-೬-೧೯೫೧) ಸ್ವಾಗತ ಸಮಿತಿ ಅಧ್ಯಕ್ಷರಾದ ಧರ್ಮ ಕಾರ್ಯಕುಶಲ ಶ್ರೀ ತೂಬುಗೆರೆ ನಂಜಪ್ಪನವರುಮಾಡಿದ ಭಾಷಣ.**

ಎಲ್ಲ ಜನಾಂಗಗಳಲ್ಲಿಯೂ ಗುರು ಸಮಾಜದ ಮಾರ್ಗದರ್ಶಕನು. ಲೋಕಕ್ಕೆ ಸೂರ್ಯನಿರುವಂತೆ ಸಮಾಜಕ್ಕೆ ಗುರು. ಆತನು ಜನತೆಯಲ್ಲಿನ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸಿ ಜ್ಞಾನೋದಯವುಂಟುಮಾಡುವನು. ಯಾವ ಸಮಾಜದಲ್ಲಿ ಸದ್ಗುರುವಿನ ಮಾರ್ಗದರ್ಶನವಿದೆಯೋ ಆ ಸಮಾಜ ಅಭಿವೃದ್ಧಿ ಸ್ಥಿತಿಯಲ್ಲಿರುತ್ತದೆ. ಗುರುವಿನ ಅಧಿಕಾರ ಕೊನೆಯಿಲ್ಲದುದು. ರಾಜನು ಕೇವಲ ಬಾಹ್ಯ ಜೀವನದ ನಿಯಾಮಕನು. ಗುರುವು ಮಾತ್ರ ಬಾಹ್ಯ–ಆಂತರ ಜೀವನಗಳೆರಡನ್ನೂ ಬೆಳಗುತ್ತಾನೆ. ಲೋಕವಂದ್ಯರಾದ ಶ್ರೀ ರೇಣುಕಾದಿ ಆಚಾರ್ಯರು, ಶ್ರೀ ಶಂಕರಾಚಾರ್ಯರು, ಶ್ರೀ ರಾಮಾನುಜಾಚಾರ್ಯರು, ಶ್ರೀಮಧ್ವಾಚಾರ್ಯರೇ ಮೊದಲಾದ ಮತಾಚಾರ್ಯರು ಮತ್ತು ಬುದ್ಧದೇವ, ಬಸವೇಶ್ವರ, ಏಸುಕ್ರಿಸ್ತ, ಪೈಗಂಬರ, ರಾಮಕೃಷ್ಣಪರಮಹಂಸ ಮಹಾತ್ಮಾ ಗಾಂಧಿ ಮುಂತಾದ ಪ್ರವಾದಿಗಳೂ ಈ ಕೆಲಸ ಮಾಡಿದ್ದಾರೆ. ಇವರ ಫಲವಾಗಿ ಭಾರತ ದೇಶ, ಹಿಂದಿನಿಂದಲೂ ಆಧ್ಯಾತ್ಮಿಕಪ್ರಗತಿಯಲ್ಲಿ ಮೊದಲನೆಯದಾಗಿದೆ. ಭಾರತ ಸಂಸ್ಕೃತಿ ವಿಶ್ವ ಸಂಸ್ಕೃತಿಯ ಶ್ರೇಣಿಯಲ್ಲಿ ಹಿರಿದೆನಿಸಿರುವುದಕ್ಕೆ ಮೇಲೆ ಹೇಳಿದ ಮಹಾತ್ಮರುಗಳ ಪ್ರಭಾವವೇ ಕಾರಣ.

## ಪ್ರಭಾವಯುತ ಮಠಾಚಾರ್ಯ ಪೀಠ

"ಇಂಥ ಪ್ರಭಾವಯುತವಾದ ಮಠಾಚಾರ್ಯ ಪೀಠಗಳಲ್ಲಿ ಶ್ರೀ ನಿಡುಮಾಮಿಡಿ ಶ್ರೀ ಶೈಲ ಪೀಠವು ಒಂದಾಗಿರುತ್ತದೆ. ಸುಮಾರು ಒಂದು ಸಾವಿರ ವರ್ಷಗಳ ಇತಿಹಾಸದಲ್ಲಿ ಈ ಪೀಠಾಧಿಪತಿಗಳು ಮಾಡಿರುವ ಮಹತ್ಕಾರ್ಯಗಳು ಚಿರಸ್ಮರಣೀಯವಾಗಿವೆ. ಈ ಪೀಠಪರಂಪರೆಯಲ್ಲಿ ಆಗಿ ಹೋದ ಶ್ರೀ ಜಗದ್ಗುರು ಪಂಡಿತಾಚಾರ್ಯರು, ಶ್ರೀ ವಿರೂಪಾಕ್ಷ ದೇಶಿಕೇಂದ್ರ ಶಿವಾಚಾರ್ಯರು, ಶ್ರೀ ಚಂದ್ರಗುಂಡದೇಶಿಕೇಂದ್ರ ಶಿವಾಚಾರ್ಯರು ಶ್ರೀ ಕರಿಬಸವರಾಜ ದೇಶಿಕೇಂದ್ರ ಶಿವಾಚಾರ್ಯರು ಮೊದಲಾದವರು ವೀರಶೈವ ಸಮಾಜದ ಏಳ್ಗೆಗಾಗಿ ಶ್ರಮಿಸಿದ್ದಾರೆ. ಸಮಾಜ ಸುಧಾರಣೆಯನ್ನು ಅತಿಶಯವಾಗಿ ಮಾಡಿರುವುದಕ್ಕೆ ಅನೇಕ ನಿದರ್ಶನಗಳಿವೆ.

ಈ ಪೀಠ ಪರಂಪರೆಯಲ್ಲಿ ಇಂದು ಪೀಠಾರೋಹಣ ಮಾಡಿರುವ ಶ್ರೀ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಪಟ್ಟಾಭಿಷಿಕ್ತರಾದ ಕೇವಲ ಹನ್ನೆರಡು ವರ್ಷಗಳ ಅವಧಿಯಲ್ಲಿ ನಾನಾ ಮುಖವಾದ ಸಾಹಿತ್ಯ, ಸಂಸ್ಕೃತಿ ಹಾಗೂ ಶ್ರೀ ಸಂಸ್ಥಾನ ಮಠದ ಏಳಿಗೆಗಾಗಿ ಶ್ರಮಿಸುತ್ತಿರುವ ವಿಚಾರ ಸುಪ್ರಸಿದ್ಧವಾಗಿದೆ. ಇಂಥ ಮಹನೀಯರ ವಾರ್ಷಿಕೋತ್ಸವವನ್ನು ನೆರವೇರಿಸಿ, ಕೃತಕೃತ್ಯರಾಗುವ ಭಾಗ್ಯ ನಮಗೆ ಲಭಿಸಿದುದು ಸುಕೃತವೆಂದು ಭಾವಿಸುತ್ತೇನೆ.

## ಸಾಂಸ್ಕೃತಿಕ ಹೋರಾಟ ಮುಗಿದಿಲ್ಲ.

ಒಟ್ಟಿನಲ್ಲಿ ಇಂದಿನ ಕಾಲ ಸೂಕ್ಷ್ಮವಾಗಿದೆ. ಪ್ರಚಲಿತ ವಿಜ್ಞಾನ ಪ್ರಪಂಚದಲ್ಲಿ ಹಿಂದಿನ ಧಾರ್ಮಿಕ ವಿಚಾರಗಳಿಗೆ ಮಾನ್ಯತೆ ಕಡಿಮೆಯಾಗುತ್ತಿದೆ. ನಾಡಿನ ಸ್ವಾತಂತ್ರ್ಯದ ಹೋರಾಟಕ್ಕೆ ಸಿಕ್ಕಿದ ನಾವು ದಡ ಮುಟ್ಟಿರುವೆವಾದರೂ ನಮಗೆ ಸಾಂಸ್ಕೃತಿಕ ಹೋರಾಟ ಮುಗಿದಿಲ್ಲ. ಮಾನವನ ವಿಚಾರಶಕ್ತಿ ಅತಿರೇಕವಾಗುತ್ತಿರುವುದು ಕಂಡುಬರುತ್ತದೆ. ಯಾವುದರಲ್ಲಿಯೂ ನಂಬುಗೆಯಿಲ್ಲ. ಶ್ರದ್ಧೆಯಿಲ್ಲ. ನಮ್ಮ ಶ್ರೇಷ್ಠವಾದ

ಸನಾತನ ಸಂಸ್ಕೃತಿ ನೆಲಸಮವಾಗುತ್ತಿದೆ. ಇಂಥಾ ಮುಗ್ಗಟ್ಟಿನ ಸಮಯದಲ್ಲಿ ಮಾನವನಿಗೆ ಸನ್ಮಾರ್ಗ ತೋರಿ ಮುನ್ನಡೆಸುವ ಕೆಲಸ ವಿಶೇಷವಾಗಿ ಆಗ ಬೇಕಾಗಿದೆ. ಇವಕ್ಕೆ ಗುರುಪೀಠಗಳ ಹೊಣೆಗಾರಿಕೆ ಹೆಚ್ಚಾಗಿದೆ. ಕೇವಲ ಬಿರುದು ಬಾವಲಿಗಳಿಗೆ ಬಲಿಬಿದ್ದು ತಮ್ಮ ಪ್ರಾಶಸ್ತ್ಯಕ್ಕಾಗಿ ಹೋರಾಡುವ ಕಾಲವಿದಲ್ಲ. ಸಮಾಜದ ದುಃಸ್ಥಿತಿಯ ಕಡೆ ತಿರುಗಿ, ಮನಮರುಗಿ, ಅದರ ಉನ್ನತಿಗಾಗಿ ದುಡಿಯುವ ಮಹನೀಯರು ಯಾವ ಪೀಠಕ್ಕೇ ಸೇರಿರಲಿ, ಆ ಪೀಠವು ಪ್ರಾಚೀನವಾಗಿರಲಿ, ನವೀನವಾಗಿರಲಿ ಅವರು ಮಾಡುತ್ತಿರುವ ಕೃತಿಯನ್ನು ಗೌರವಿಸಿ ಪ್ರೋತ್ಸಾಹಿಸುವುದೇ ಸಮಾಜದ ಕರ್ತವ್ಯ.

ಮತ ಮತಗಳ ಹೆಚ್ಚಳಕ್ಕಾಗಿ ಹೋರಾಡಿದ ನಾವು ಮಠ ಮಠಗಳ ಹಿರಿಮೆಗಾಗಿ ಹೋರಾಡಿ ಅಧೋಗತಿಗಿಳಿಯುತ್ತಿದ್ದೇವೆ. ಇದು ಇನ್ನಾದರೂ ಕೊನೆಗಾಣಬೇಡವೇ ? ಸಮಾಜ, ಸಂಸ್ಕೃತಿ, ಸಾಹಿತ್ಯ ಸಂರಕ್ಷಣೆ ಮೇಲಾಗಿ ನಿಷ್ಠೆಯುಳ್ಳ ಮಹನೀಯರೆಲ್ಲರೂ ನಮಗೆ ಪೂಜ್ಯರು ಎಂಬ ಭಾವನೆಯಿಂದ ನಾವು ಇಂಥಾ ಪವಿತ್ರ ಕಾರ್ಯಗಳನ್ನು ಮಾಡೋಣ.

ಇಂತಹ ಮಹನೀಯರಲ್ಲಿ ಶ್ರೀ ನಿಡುಮಾಮಿಡಿ ಶ್ರೀ ಶೈಲ ಜಗದ್ಗುರು ಮಹಾಸ್ವಾಮಿಗಳವರೂ ಒಬ್ಬರು. ಅವರು ಈ ಹನ್ನೆರಡು ವರ್ಷಗಳ ಅವಧಿ ಯಲ್ಲಿ ಹದಿನೈದು ಉತ್ತಮ ಗ್ರಂಥಗಳನ್ನು ಬರೆದು ಪ್ರಕಾಶಪಡಿಸಿದ್ದಾರೆ. ಶಿಷ್ಯೋದ್ಧಾರಕ್ಕಾಗಿ, ಪೀಠದ ಉದ್ಧಾರಕ್ಕಾಗಿ ದೇಶಸಂಚಾರ ಮಾಡಿ ಉಪದೇಶ ಭಾಷಣಗಳ ಮೂಲಕ ನಾಡಿಗೆ ಸುಪರಿಚಿತರಾಗಿದ್ದಾರೆ. ಇಂತಹ ಮಹಾ ಸ್ವಾಮಿಗಳ ವಾರ್ಷಿಕೋತ್ಸವದ ಮಹಾ ಸಮಾರಂಭವನ್ನು ನೆರವೇರಿಸಲು ಬೆಂಗಳೂರಿನ ಪೀಠದ ಶಿಷ್ಯರೂ, ಪೀಠಾಭಿಮಾನಿಗಳೂ ಮಹಾಜನರೂ ಔದಾರ್ಯದಿಂದಲೂ ಶ್ರದ್ಧಾಭಕ್ತಿಯಿಂದಲೂ ಮುಂದೆ ಬಂದು ಮಾದರಿ ಯಾಗಿದ್ದಾರೆ. ಈ ಕಾರ್ಯಭಾರವನ್ನು ಹೊರುವ ಶಕ್ತಿ ನನಗಿಲ್ಲ. ಆದರೂ ಮಹಾಜನರ ಹೃತ್ಪೂರ್ವಕವಾದ ಪ್ರೇರಣೆಯಿಂದಲೂ ಮಹಾಸ್ವಾಮಿಗಳವರ ಕೃಪಾವಿಶೇಷದಿಂದಲೂ ಈ ಕಾರ್ಯಕ್ಕೆ ಹೆಗಲು ಕೊಟ್ಟಿದ್ದೇನೆ. ಇದೇ ರೀತಿ ಮುಂದೆಯೂ ತಾವು ನನಗೆ ಬೆಂಬಲವಾಗಿದ್ದು ಸಹಕರಿಸಿ ಈ ಪವಿತ್ರಕಾರ್ಯ ವನ್ನು ಯಶಸ್ವಿಯಾಗಿ ಆಗುಮಾಡಿಕೊಡಬೇಕಾಗಿ ಪ್ರಾರ್ಥಿಸುತ್ತೇನೆ.

## ಸುಸ್ವಾಗತ

ಈ ಉತ್ಸವಕ್ಕೆ ಕರ್ಣಾಟಕ ಆಂಧ್ರ ಹೈದರಾಬಾದ್ ಪ್ರಾಂತ್ಯಗಳಿಂದ ಅನೇಕ ಮಂದಿ ಪೀಠದ ಶಿಷ್ಯರು, ಅಭಿಮಾನಿಗಳು ಆಗಮಿಸಿರುವುದು ವಿಶೇಷವಾದ ಶೋಭೆಯನ್ನುಂಟುಮಾಡಿದೆ. ಅವರೆಲ್ಲರಿಗೂ ಬೆಂಗಳೂರಿನ ಮಹಾಜನರ ಪರವಾಗಿ ಸ್ವಾಗತ ಬಯಸುತ್ತೇನೆ. ಕಾಲ ಕಷ್ಟಕರವಾಗಿದೆ. ಯಥಾಶಕ್ತಿ ನಾವು ಮಾಡಿರುವ ವ್ಯವಸ್ಥೆಯನ್ನು ದೊಡ್ಡದೆಂದು ಭಾವಿಸಿ ತಾವು ತೃಪ್ತರಾಗಬೇಕಾಗಿದೆ. ಮಹಾಸ್ವಾಮಿಯವರ ಕೃಪಾ ವಿಶೇಷದಿಂದ ನಾವು ಮಾಡುತ್ತಿರುವ ಈ ಉತ್ಸವದಲ್ಲಿ ತಾವು ಸಹಕರಿಸಿ ತಮ್ಮ ಕಾರ್ಯವೆಂದು ಭಾವಿಸಬೇಕಾಗಿ ಪ್ರಾರ್ಥಿಸುತ್ತೇನೆ. ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ನಾವು ಪ್ರಾರ್ಥಿಸಿದೊಡನೆಯೇ ಸಂತೋಷದಿಂದ ಒಪ್ಪಿದ ಅಧ್ಯಕ್ಷ ಮಹಾಶಯರಿಗೂ, ಪಂಡಿತರು, ಕಲಾವಿದರು ಮೊದಲಾದವರಿಗೂ ಸುಸ್ವಾಗತ ಬಯಸುತ್ತೇನೆ.

ತಾಯಿನಾಡು
ತಾ॥೨೭-೬-೧೯೫೧
ಬೆಂಗಳೂರು

ತೂಬುಗೆರೆ ನಂಜಪ್ಪ.
ಸ್ವಾಗತಸಮಿತಿ ಅಧ್ಯಕ್ಷ.

---

# ಅಭಿನಂದನ ಪದ್ಯಮಾಲಿಕೆ

ಶಾ. ವಿ.

ಶ್ರೀ ಸಂಜ್ಞಾಪತಿ ರತ್ನಪೀಠಕಧಿಪಂ ಸಾಹಿತ್ಯರತ್ನಾಕರಂ
ಧೀಸಂಪೂಜ್ಯ ಶಿವಾಂಶಜಾತನನುಪಂ ಶ್ರೀಶೈಲ ಸಂಸ್ಥಾನದ।
ವ್ಯಾಸಂ ತಾನೆನೆ ಪೇಳ್ವ ಶೈವಮತದಾ ಸಿದ್ಧಾಂತಮಂ ಲೋಗರಿಂ
ಗಾ ಸಾಹಿತ್ಯದ ಕಾಂತಿ ಚನ್ನಬಸವ ಶ್ರೀ ದೇಶಿಕೇಂದ್ರಂ ನುತಂ ॥

ಮಾನಿನಿ.

ಶ್ರೀ ನಿಡುಮಾಮಿಡಿ ಭಾಸ್ಕರಪೀಠದ ಕಾಂತಿಯ ತೋರುವ ವಾಗ್ಮಿನುತಂ
ಜ್ಞಾನಕಧೀಶನು ಸತ್ಕವಿಪಾಲನು ವಂದಿತ ಸದ್ಗುರು ಶಾಂತಿಯುತಂ।
ಭಾನುಸುತೇಜನು ಶೈವವಿಭೂತಿಯ ಲೋಕದೆ ಶಾಶ್ವತಗೈದಿರುವಾ
ಮಾನಿತ ಕನ್ನಡ ಮಾತೆಯ ಮೋದಕೆ ಕಾರಣಕರ್ತನು ಸತ್ಯಹಿತಂ ॥

ಭಾ. ಷ.

ಧರೆಯೊಳಜ್ಞರಿಗೆಲ್ಲ ರವಿಯಂ
ತಿರುತ ಪಂಡಿತವರ್ಯ ಪೀಠವ
ನಿರಿಸೆ ಗೂಳೂರಲ್ಲಿ ವಿವರಗಳೆಲ್ಲ ಯೋಗದಲಿ।
ಭರದೊಳರಿದೀ ಚನ್ನಬಸವೇ
ಶ್ವರ ಗುರೂತ್ತಮ ತತ್ವಸಾರಗ
ಳರುಹಿ ಪಾಲಿಸನಬ್ಜತತಿಗಾ ರವಿಯ ಪರಿಯಿಂದೆ ॥

ಭು. ಪ್ರ.

ಅಂದವಾದ ಪೀಠದಿಂದು ನಿಂದು ಲೋಗರೆಲ್ಲರಾ
ನಂದ ಮೊಂದೆ ಶಾಂತಿಯಿಂದ ಪೇಳ್ವ ಧರ್ಮಮಾರ್ಗಮಂ।
ವಂದಿತಂ ಸುಕೀರ್ತಿಯಾಂತ ಸಿಂಹಪೀಠಕೇಶನೆಂ
ದೊಂದೆ ಭಕ್ತಿಯಿಂದ ಮಂದಿ ಜಾನಗೈವರಾವಗಂ ॥

ಕಂ॰

ಶಾಶ್ವತ ಸಾಹಿತ್ಯವದೆಂ
ಬೈಶ್ವರ್ಯವ ಗಳಿಸುತನಿಶ ದಾನವಗೈವಾ ।
ವಿಶ್ವಾತ್ಮನಂಶಜನೆ ಭುವಿ
ಗೈಶ್ವರ್ಯವು ನಿನ್ನ ವಿನುತ ಸಾಹಿತ್ಯ ದಿಟಂ ॥

ಮ॰ ಕೋ॰

ಪಂಡಿತಾಂಬುಧಿಚಂದ್ರ ಪಾವನರೂಪ ಸದ್ಗುರುವರ್ಯ ನೀ
ಪಂಡಿತಾರ್ಯ ಸುಪೀಠವೇರಿದ ದ್ವಾದಶಾಬ್ದ ಮಹೋತ್ಸವಂ ।
ಕಂಡ ಲಕ್ಷ್ಮಿನೃಸಿಂಹ ಪೂಜಿಪ ಪದ್ಯರತ್ನಸುಮಂಗಳಿಂ
ಗೊಂಡ ಭಕ್ತಿಯ ಭಾವದಿಂ ಖರ ಜ್ಯೇಷ್ಠದಾಸಿತ ಹತ್ತರೊಳ್ ॥

ಕನ್ನಡ ಸಾಹಿತ್ಯ ಸೇವಾಸದನ
ಸಂತೆಕಲ್ಲಹಳ್ಳಿ.

ಇಂತು
ಲಕ್ಷ್ಮೀನರಸಿಂಹ
ವ್ಯವಸ್ಥಾಪಕ

---

# ನವರತ್ನಮಾಲಿಕೆ

## ರತ್ನ ೧

ಜಗದಾಚಾರ್ಯವರ್ಯರ ಪಟ್ಟಾಭಿಷೇಕದ ಪರ್ವವಯ್ಯ. ಅಸದೃಶ ವಯ್ಯ, ಜಗದಾಚಾರ್ಯವರ್ಯರೆ ನಿಮ್ಮ ಚರಣಕ್ಕೆ ಶರಣು.

ಪಟ್ಟದ ಪರ್ವವೆಂತಹುದಯ್ಯ? ಪರ್ವತದಂಥ ಪರ್ವ, "ಶ್ರೀಶೈಲ ಶಿಖರಂ ದೃಷ್ಟ್ವಾ ಪುನರ್ಜನ್ಮ ವಿನಶ್ಯತಿ" ಎಂದು ಪುರಾಣಿಕರು, "ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ"ವೆಂದು ಬಸವಣ್ಣ, 'ಶ್ರೀಶೈಲ ಸಿಂಹಾಸನವೆಂದು' ಚನ್ನಬಸವಣ್ಣ, 'ಶ್ರೀ ನಗಕಲ್ಪತರುವೆಂದು' ಪಾಲ್ಕುರಿಕೆ ಸೋಮ, 'ಸಿದ್ಧಿಗೆ ಪ್ರಸಿದ್ಧಿ'ಯೆಂದು ಶ್ರೀಹರ್ಷ, 'ತಪಸ್ಸಿಗೆ ಸ್ಥಾನವೆಂದು ಭವಭೂತಿ, 'ಶಿವ ಸಾಯುಜ್ಯಸೋಪಾನವೆಂದು ಶಿವಶರಣರು, 'ಅಸ್ಮತ್ ಸಿಂಹಾಸನವೆಂದು ಹದಿನೆಂಟು ವರ್ಣದವರು, ತಮ್ಮ ಗಡಿನಾಡಿನ ಕುರುಹೆಂದು ತ್ರಿಲಿಂಗರು ಹೇಳುತಿರುವರಯ್ಯ ನಮ್ಮ ಆಚಾರ್ಯರ ಪರ್ವತ! ಅಲ್ಲಿರುವ ಸಿಂಹಾಸನಾ ಧೀಶ್ವರರೇ ಶ್ರೀ ೧೦೮ ಜಗದ್ಗುರು ಪಂಡಿತಾರಾಧ್ಯರು, ಅವರ ಕರಕಮಲ ಸಂಜಾತರೇ ಶ್ರೀ ನಿಡುಮಾಮಿಡಿ ಆಚಾರ್ಯ ಪರಂಪರೆ, ಅಭಿನವ ಪಂಡಿತಾ ರಾಧ್ಯರಂತೆ ವಿರಾಜಿಸುವವರೆ ಜಗದ್ಗುರು ಪಟ್ಟಾಧ್ಯಕ್ಷ ಶ್ರೀ ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರು. ಅವರ ಹನ್ನೆರಡನೇ ವಾರ್ಷಿಕೋತ್ಸವ ಪರ್ವವಿದು ನೋಡಿರಯ್ಯ ನಮ್ಮ ಜಗದ್ಗುರು ಚರ್ಯೆ!

## ರತ್ನ ೨

ಸನಾತನವಾದರೇನಯ್ಯ, ಆಧುನಿಕವಾದರೇನಯ್ಯ, ಜಗದೀಶವಾಕ್ಯ ವಾದರೇನಯ್ಯ, ಜನತಾವಾಕ್ಯವಾದರೇನಯ್ಯ; ನಿಗಮವಾದರೇನಯ್ಯ, ಆಗಮವಾದರೇನಯ್ಯ; ಪಾರಲೌಕಿಕವಾದರೇನಯ್ಯ, ಲೌಕಿಕವಾದರೇನಯ್ಯ ಗೀರ್ವಾಣವಾದರೇನಯ್ಯ, ಶರಣವಾಣಿಯಾದರೇನಯ್ಯ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು, ಎನಗಿಂತ ಕಿರಿಯರಿಲ್ಲ, ಅಯ್ಯಾ ಎಂದರೆ ಸ್ವರ್ಗ, ದೇಹವೇ ದೇಗುಲ, ಮುಂತಾದ ಶರಣರ ವಾಣಿಯನರಿದು ಆಚರಿಸಬಲ್ಲಡೆ

ನಮ್ಮ ಜಗದ್ಗುರು ಮಹಾಸ್ವಾಮಿಯವರ ಸಾಹಿತ್ಯದಲ್ಲಿ ನೋಡಿರಯ್ಯಾ; ನೋಡಿರಯ್ಯ ವಚನಾಂಜಲಿ, ಓದಿರಯ್ಯ ವಚನಮಂಜರಿ, ಮಣಿಕಾಂತಿಗಳ!

ರತ್ನ ೩

" ಮಾತಾ ಗೌರೀ ಪಿತಾ ರುದ್ರಃ ಈಶ್ವರಃ ಕುಲಮೇವ ಚ| ಬಾಂಧವಾ ಶ್ಶಿವಭಕ್ತಾಶ್ಚಸ್ವದೇಶೋ ಭುವನತ್ರಯಮ್", ಎಂದುದಾಗಿ ತಾಯಿ ಪಾರ್ವತಿ, ತಂದೆ ಶಿವ, ಬಂಧುಗಳು ಶಿವಭಕ್ತರು, ಸ್ವದೇಶವೇ ಮೂಲೋಕ ಎಂದು ಸಾರಿದರು ನಮ್ಮ ಆದ್ಯರು. ಈ ಪಥವೇ ಪಂಚಾಚಾರ, ಈ ಆವರಣವೇ ಅಷ್ಟಾವರಣ, ಈ ಶಾಲೆಯೇ ಶೀಲ, ಈ ಮಥನವೇ ಮತ, ಈ ಅರಿಕೆಯೇ ಆರಾಧನೆ. ಈ ವಿಚಾರವೇ ವೀರಶೈವ, ನುಡಿಯಂತೆ ನಡೆಯುವುದೇ ನಮ್ಮ ಧರ್ಮ. ಈ ಸುಬೋಧವೆಲ್ಲಯ್ಯಾ ನಮ್ಮ ಜಗದಾಚಾರ್ಯ ಚನ್ನಬಸವ ರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಯವರ ಭಾಷಣದಲ್ಲಿ.

ರತ್ನ ೪

ಸಮಯಗಳು ಸಾವಿರಾರು. ಮತಗಳು ಅಮಿತ. ಸಿದ್ಧಾಂತಗಳು ಶತಾಧಿಕ್ಯ. ಇವೆಲ್ಲಿ ಹುಟ್ಟಿದವಯ್ಯ ವಿಚಾರಸಾಗರದಲ್ಲಿ. ಇದರ ಫಲ ವೆಂತಹುದಯ್ಯ—ಸಾವಿರ ಸಂಶಯಗಳು. ಮೇಲು ಕೀಲು ನಿರ್ಣಯಗಳು. ಅನೈಕಮತ್ಯ ಕೃತ್ಯಗಳು. ಇದರ ಪರಿಹಾರಕ್ಕಾಗಿಯೇ ಇಷ್ಟಲಿಂಗಧಾರಣೆ ವಿಹಿತವಾಯ್ತು. ಇಷ್ಟಲಿಂಗದಿಂದ ಅನಿಷ್ಟಪರಿಹಾರವೆಂಬುದನು ತಿಳಿಸಿದುದು. 'ಇಷ್ಟಲಿಂಗವಿಜ್ಞಾನ.' 'ನಿಮ್ಮ ಆಕಾರದಿಂದ ಹುಟ್ಟಿ, ಪ್ರಾಣ ಕಲೆಯಿಂದ ಕೂಡಿ, ದೇಹದಲಿ ವಿರಾಜಿಸುತ್ತಾ ನಿಮ್ಮ ಜೀವನಾಧಾರಕ್ಕೆ ಕಾರಣವಾಗು ವುದೇ ಇಷ್ಟಲಿಂಗದ ಹಿರಿಮೆ. ಇದು ಪ್ರಕಟವಾದುದು ನಮ್ಮ ಜಗದ್ಗುರು ಸನ್ನಿಧಿಯಲ್ಲಿ.

ರತ್ನ ೫

ಅಯ್ಯಾ ಇದೇನು ವಿಪರೀತವಯ್ಯಾ! ಪೀಡಿಸುವುದಕ್ಕೆ ಪೀಠಾಧಿ ಪತ್ಯವೆ? ಮೋಹಿಸುವುದಕ್ಕೆ ಮಠಾಧಿಪತ್ಯವೆ? ಚೌರ್ಯತ್ವಕ್ಕೆ ಗುರುತ್ವವೆ? ದೋಷನಿರೂಪಣೆಗೆ ಕಾಷಾಯ ಧಾರಣವೆ? ಆಂದೋಳನಕ್ಕೆ ಅಂದೋಳಿ ಕೆಯೆ? ಹಿಂಸಿಸುವುದಕ್ಕೆ ಸಿಂಹಾಸನವೇ? ಚಿತ್ರವಧೆಗೆ ಛತ್ರಿಯೇ? ಮೋಸಕ್ಕೆ

ವೇಷವೆ ? ವಂಚನೆಗೆ ಸಂಚಾರವೆ ? ಛೀಕರಕ್ಕೆ ಬಿರುದು ಬಾವಲಿಯೆ ? ಅಪಹರಣಕ್ಕೆ ಉಪದೇಶವೆ ? ಇಂಥ ದುಷ್ಪಥ ನಿವಾರಣೆಯೆಲ್ಲಯ್ಯಾ— ಶ್ರೀಗಿರಿ ನಿಡುಮಾಮಿಡಿ ಸಿಂಹಾಸನಾಧ್ಯಕ್ಷ ಚನ್ನಬಸವರಾಜ ದೇಶಿಕೇಂದ್ರರ ಜೀವನದಲ್ಲಿ ನೋಡಿರಯ್ಯಾ, ಅವರೇ ಆದರ್ಶ !

ರತ್ನ ೬

ಆಚಾರ್ಯತ್ವಕ್ಕೆ ಅರ್ಹವಾವುದಯ್ಯ ! ಸುವಿಚಾರ ಸದಾಚಾರ, ಸದ್ಧರ್ಮ, ಸತ್ಕರ್ಮ, ಸಾಹಿತ್ಯ, ಸಾಮರ್ಥ್ಯ, ಸರಸಭಾಷಣ, ಸತ್ಯವಚನ, ಸಾಧುಸಂಪತ್ತಿ, ಸದ್ಗುಣ ಪ್ರವೃತ್ತಿ, ಸಂಕಲಿತಜ್ಞಾನ, ಸಂಕಲ್ಪಿತಧ್ಯಾನ, ಇವು ಸೇರಿರುವುದೆಲ್ಲಿ ಒಡೆಯ ನಿಡುಮಾಮಿಡಿ ಪ್ರಸನ್ನ ಚನ್ನಬಸವರಾಜ ಶಿವಾಚಾರ್ಯರಲ್ಲಿ.

ರತ್ನ ೭

ಕಲಿಕಾಲವೆಂತಹುದಯ್ಯ ? ಸಹಕಾರಹೀನ, ಸ್ವಾಭಿಮಾನ, ಸಮತಾ ರಹಿತ, ಸ್ವಾರ್ಥವಿಹಿತ, ಧನಗುಪ್ತ, ಧರ್ಮಲುಪ್ತ, ಮೋಸದ ವೇಷ. ಮುಚ್ಚಿದ ದೋಷ. ಕಪಟದ ಭಾಷೆ, ಕಾಮಾಭಿಲಾಷೆ ; ದ್ರೋಹದ ಚಿಂತೆ. ಇಂಥ ಕಾಲಧರ್ಮ ಪ್ರತಿಭಟನೆಯೆಲ್ಲಿ ? ನಮ್ಮ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರಲ್ಲಿ.

ರತ್ನ ೮

ಬಾಲ್ಯವಾದರೇನಯ್ಯ ಭಕ್ತಿಪ್ರಚಾರ ನಿಮ್ಮ ಸೊತ್ತು. ಬಲಹೀನವಾದ ರೇನಯ್ಯ ಭಕ್ತರಕ್ಷಣೆ ನಿಮ್ಮ ಧ್ಯೇಯ. ಆಂಗ್ಲವಿದ್ಯೆಯಿಲ್ಲದಿದ್ದರೇನಯ್ಯ. ಆದರ್ಶಭಾಷಣ ನಿಮ್ಮ ವಾಣಿ. ಕನ್ನಡವೇ ಆದರೇನಯ್ಯ ಕಮನೀಯವು ನಿಮ್ಮ ಸಾಹಿತ್ಯ. ಆಚಾರ್ಯ ಪೀಠವಾದರೇನಯ್ಯ ಗುರುಚರಾಭೇದ ನಿಮ್ಮ ಭಾವ. ವಿತ್ತದಭಾವವಾದರೇನಯ್ಯ ವಿದ್ಯಾರ್ಥಿ ಸಹಾಯ ನಿಮ್ಮ ಚಿಂತೆ. ಸಹಕಾರವಿಲ್ಲದಿದ್ದರೇನಯ್ಯ ಚಾರಿತ್ರಿಕ ಸಂಶೋಧನೆ ನಿಮ್ಮ ಚರ್ಯೆ. ಗುರು ತರಭಾರವಿದ್ದರೇನಯ್ಯೆ ಶರಣರ ಜೀವನದೃಶ್ಯ, ರಚನೆ ನಿಮ್ಮ ನಿತ್ಯಕೃತ್ಯ, ವಿತ್ತಪ್ರದಾತರು ವಿರಳವಾದರೇನಯ್ಯಾ ಹತ್ತಾರು ಗ್ರಂಥಗಳ ಮುದ್ರಿಸುವುದೇ ನಿಮ್ಮ ಕೆಲಸ, ಛತ್ರಚಾಮರಾಂದೋಳಿಕಾದಿ ಸಾರ್ವಭೌಮ ಸಂಪದಿದ್ದ

ರೇಸಯ್ಯ ನಿರಾಡಂಬರ ದಿನಾಚರಣೆ ನಿಮ್ಮ ಕಾರ್ಯಕ್ರಮ, ಅನುಶಾಸನವಿಲ್ಲದೆ ಅನುಸರಣೆ. ಕಠಿಣವಿಲ್ಲದೆ ಕನಿಕರ, ಅಜ್ಞಾತವಾಸವಿಲ್ಲದೆ ಅನುಕ್ಷಣ ದರ್ಶನ. ನೆಲೆಸಿರುವುದು ನಮ್ಮ ಶ್ರೀಗಿರಿ ನಿಡುಮಾಮಿಡಿ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರಲ್ಲಿ.

## ರತ್ನ ೯

ಲಕ್ಷ್ಯ ಸಾಹಿತ್ಯದಲ್ಲಿ, ಉಪೇಕ್ಷೆ ಕುತರ್ಕದಲ್ಲಿ, ವೀಕ್ಷೆ ಭಕ್ತ ಪುರೋಭಿವೃದ್ಧಿಯಲ್ಲಿ, ಸಮೀಕ್ಷೆ ನ್ಯಾಯವಿಚಾರದಲ್ಲಿ, ದೀಕ್ಷೆ ಷಟ್‌ಸ್ಥಲ ಧರ್ಮಾಚರಣೆಯಲ್ಲಿ, ರಕ್ಷೆ ವೀರಶೈವಾಚಾರದಲ್ಲಿ, ಉಪೇಕ್ಷೆ ಲೌಕಿಕದಲ್ಲಿ, ಶಿಕ್ಷೆ ಶಿಷ್ಯರಲ್ಲಿ ಪರೋಕ್ಷೆ ಮುಖಸ್ತುತಿಯಲ್ಲಿ, ಸಮಕ್ಷ ಸರ್ವರಲ್ಲಿ, ಪರೀಕ್ಷೆ ಅಂತರ್ಮುಖದಲ್ಲಿ, ದಕ್ಷತೆ ನಿಮ್ಮಲ್ಲಿ, ಈ ದೀಕ್ಷಿತಭಕ್ತಿ ನಿಮ್ಮ ಚರಣಕಮಲದಲ್ಲಿ, ಶ್ರೀಗಿರಿ ವಿರೂಪಾಕ್ಷ ಕೃಪಾಪೇಕ್ಷ ನಮ್ಮ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ತಾವೇ ಆದರ್ಶ.

## ಮೇರುಮಣಿ

ನವರತ್ನ ಖಚಿತಕ್ಕೆ ಕನಕರೂಪ ಸೌಂದರ್ಯವಿಲ್ಲದಿದ್ದರೇನಯ್ಯ ? ರುಚಿ ಮಾಧುರ್ಯ ಇಕ್ಷುವಿನಲ್ಲಿಲ್ಲವೆ ? ಆಕಾರ ವಿಕಾರವಾದರೇನಯ್ಯ ಮನೋಹರ ಸುಗಂಧ ಮನೋರಂಜನೀ ಕುಸುಮದಲ್ಲಿಲ್ಲವೇ ? ಪಾಂಡಿತ್ಯವಿಲ್ಲದ ರಚನೆಯಾದರೇನು ಭಾಷಾದೋಷ ರಚನೆಯಾದರೇನು ? ತೆಲುಂಗನ ಕನ್ನಡವಾದರೇನು ? ಸ್ವಾರಸ್ಯವಿದ್ದರೆ ಸಾಕಲ್ಲವೆ ? ಸಾಹಿತ್ಯವಿದ್ದರೆ ಸಾಕಲ್ಲವೆ ? ಮಹಾಸ್ವಾಮಿಯ ಮನವಿದ್ದರೆ ಸಾಕು. ಸಭಾಸದರ ಸಮ್ಮತಿಯಿದ್ದರೆ ಸಾಕು. ಓದುಗರ ಮೋದವಿದ್ದರೆ ಸಾಕು. ಧನ್ಯನಾದೆ. ಅಕ್ಕುಲಯ್ಯ ದೀಕ್ಷಿತನ ಅಭಿವಂದನೆ! ಸಮರ್ಪಣೆ ನಮ್ಮ ಜಗದ್ಗುರು ಚರಣಸರೋಜಂಗಳಿಗೆ; ದ್ವಾದಶ ವಾರ್ಷಿಕೋತ್ಸವದಂತೆ ಶತಮಾನೋತ್ಸವವಾಗಲಿ.

ಜಯವಾಗಲಿ ಜನಜಂಗುಳಿಗೆ.

ವಿಮರ್ಶವಿಶಾರದ
ಜಿ. ಟಿ. ಅಕ್ಕುಲಯ್ಯ ದೀಕ್ಷಿತ,
ಮದನಪಲ್ಲಿ.

ಬೆಂಗಳೂರು
೨೮-೬-೧೯೫೧

ಶ್ರೀಮನ್ನಿಡುಮಾಮಿಡಿ ಗಿರಿರಾಜ ಮಣಿಖಚಿತಕನಕ
ಸೂರ್ಯಸಿಂಹಾಸನಾಧೀಶ್ವರ
ಶ್ರೀ ೧೦೮ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ
ಮಹಾಸ್ವಾಮಿಗಳವರ
೧೨ ನೇ ವಾರ್ಷಿಕೋತ್ಸವ ಸಂದರ್ಭದಲ್ಲಿ
ತಾ|| (೨೮-೬-೧೯೫೧)
ಬೆಂಗಳೂರಿನ ಶಿಷ್ಯರು ಮತ್ತು ಮಹಾಜನರು ಶ್ರದ್ಧಾಭಕ್ತಿಪೂರ್ವಕವಾಗಿ
ಅರ್ಪಿಸಿದ

# ಬಿನ್ನವತ್ತಳೆ

ಪೂಜ್ಯ ಜಗದ್ಗುರುಗಳವರೆ,

ಪರಮಪೂಜ್ಯರೂ ಸಾಹಿತ್ಯ ಸಮಾಜ ಸಂರಕ್ಷಕರೂ ಲೋಕವಂದ್ಯರೂ ಆದ ಮಹಾಸ್ವಾಮಿಗಳವರ ೧೨ನೇ ವಾರ್ಷಿಕೋತ್ಸವ ಮಹಾಸಮಾರಂಭವು ನಮ್ಮ ಬೆಂಗಳೂರು ನಗರದಲ್ಲಿ ರೆವಿನ್ಯೂ ಮತ್ತು ಮುಜರಾಯಿ ಮಾನ್ಯ ಸಚಿವರಾದ ಶ್ರೀಮಾನ್ ಎಚ್. ಸಿದ್ದಯ್ಯನವರು ಬಿ.ಎ.,ಎಲ್ಎಲ್.ಬಿ., ಅವರ ಘನ ಅಧ್ಯಕ್ಷತೆಯಲ್ಲಿ ನೆರವೇರುವ ಭಾಗ್ಯ ಲಭಿಸಿದುದಕ್ಕಾಗಿ ನಾವೆಲ್ಲರೂ ಕೃತಕೃತ್ಯರೆಂದು ಭಾವಿಸುತ್ತೇವೆ.

ದೈವಾಂಶ ಸಂಭೂತರಾದ ತಾವು ಕನ್ನಡ ನಾಡಿನ ಗಂಡುಮೆಟ್ಟಾದ ಬೆಳಗಾಂವಿ ಡಿಸ್ಟ್ರಿಕ್ಟಿನಲ್ಲಿ ಅವತರಿಸಿ, ಬಾಲ್ಯದ ಅಭ್ಯಾಸವು ಮುಗಿದಮೇಲೆ ದೈವಯೋಗದಿಂದ ಪರಮಪೂಜ್ಯ ಶ್ರೀ ನಿ. ಪ್ರ. ಲಿಂ. ಹಾನಗಲ್ಲು ಕುಮಾರ ಸ್ವಾಮಿಗಳವರ ಕೃಪಾದೃಷ್ಟಿಗೆ ಪಾತ್ರರಾಗಿ ಶಿವಯೋಗಮಂದಿರವನ್ನು ಸೇರಿದಿರಿ. ಅಲ್ಲಿ ಸುಮಾರು ೧೦-೧೨ ವರ್ಷಗಳ ವರೆಗೆ ಸತತ ಅಭ್ಯಾಸವನ್ನು ಮಾಡಿ ಕನ್ನಡದಲ್ಲಿ ನಿಷ್ಣಾತರಾದುದಲ್ಲದೆ ಸಂಸ್ಕೃತದಲ್ಲಿ ಸಾಹಿತ್ಯ, ವ್ಯಾಕರಣ ಮತ್ತು ವೇದಾಂತ ಭಾಗಗಳಲ್ಲಿ ಪಾಂಡಿತ್ಯ ಸಂಪಾದಿಸಿದಿರಿ. ಶಿವಯೋಗ ಮಂದಿರದ ಯೋಗಶಾಲೆಯ ವಿದ್ಯಾರ್ಥಿಗಳಲ್ಲಿ ಒಬ್ಬರಾಗಿ ಯೋಗದಲ್ಲಿಯೂ

ಅನುಭವಿಗಳೆನಿಸಿದಿರಿ. ಶಿವಯೋಗಮಂದಿರದಲ್ಲಿನ ಪ್ರಗತಿಪರವಾದ ತಮ್ಮ ಕಾರ್ಯಕಲಾಪಗಳಿಗೆ ತಮ್ಮ ನೇತೃತ್ವದಲ್ಲಿ ಹೊರಡುತ್ತಿದ್ದ ಕಲಾಪೂರ್ಣವಾದ ಕೈ ಬರೆಹದ 'ಸುಕುಮಾರ' ಮಾಸಿಕವು ನಿದರ್ಶನವಾಗಿದೆ. ತರುವಾಯ ಶರಣ ಸಾಹಿತ್ಯ, ಶಿವಾನುಭವ ಜಯಕರ್ಣಾಟಕ ಮುಂತಾದ ಪ್ರಬುದ್ಧ ಪತ್ರಿಕೆಗಳಲ್ಲಿ ಬರೆಯುತ್ತಿದ್ದ ವಿಚಾರ ಪೂರ್ಣ ಲೇಖನಗಳಿಂದ ತಾವು ಕನ್ನಡ ನಾಡಿಗೆ ಪರಿಚಿತರಾದಿರಿ. ಮುಂದೆ ಪೋಸ್ಟ್ ಕಾರ್ಡು ಸೈಜಿನ ಒಂದು ಪಕ್ಕದಲ್ಲಿ ೪೦ ಸಾವಿರ ಅಕ್ಷರಗಳ ೧೫ ಸಾವಿರ ಶಬ್ದಗಳುಳ್ಳ ಲೇಖನವನ್ನು ಬರೆದು ಕನ್ನಡ ಸಾಹಿತ್ಯ ಪರಿಷತ್ತಿಗೆ ಒಪ್ಪಿಸಿದುದು ಇಡಿಯ ಕನ್ನಡನಾಡಿನಲ್ಲಿ ತಮ್ಮ ವೈಶಿಷ್ಟ್ಯವನ್ನು ಸ್ಥಾಪಿಸಿತು.

ಹೀಗೆ ಸಾಹಿತ್ಯ, ಯೋಗಶಾಸ್ತ್ರಭಾಗಗಳಲ್ಲಿಯೂ, ವಿಮರ್ಶನ, ಲೇಖನ ಮತ್ತು ಅನುಭವಮಾರ್ಗಗಳಲ್ಲಿಯೂ ನಿಪುಣರೆನಿಸಿರುವ ತಾವು ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನ ಪೀಠಕ್ಕೆ ಅಧ್ಯಕ್ಷರಾಗುವ ಸುಯೋಗವು ಲಭಿಸಿದುದು ವೀರಶೈವ ಸಮಾಜದ ಅಷ್ಟೇ ಏಕೆ ಇಡೀ ನಾಡಿನ ಸೌಭಾಗ್ಯವೆಂದು ಭಾವಿಸುತ್ತೇವೆ.

ಶ್ರೀಮನ್ನಿಡುಮಾಮಿಡಿ ಶ್ರೀ ಶೈಲಪೀಠವು ಅತ್ಯಂತ ಪ್ರಾಚೀನವೂ ಪ್ರಭಾವಯುತವೂ ಆದುದಾಗಿರುತ್ತದೆ. ಒಂದು ಸಾವಿರ ವರ್ಷಗಳ ಸುಮಾರಿನಿಂದ ಈ ಪೀಠದ ನಿರ್ಮಲವೂ ಉಜ್ವಲವೂ ಆದ ಯಶಸ್ಸು ಕರ್ಣಾಟಕ, ಆಂಧ್ರ, ಮಹಾರಾಷ್ಟ್ರ ಮತ್ತು ತಮಿಳು ನಾಡುಗಳಲ್ಲಿ ಪ್ರಖ್ಯಾತವಾದುದಾಗಿದೆ. ಈ ಪೀಠಾಧಿಪತಿಗಳಾಗಿದ್ದ ಜಗದ್ಗುರು ಪಂಡಿತಾರಾಧ್ಯರು, ವಿರೂಪಾಕ್ಷ ದೇಶಿಕೇಂದ್ರ ಶಿವಾಚಾರ್ಯರು, ಚಂದ್ರಗುಂಡ ದೇಶಿಕೇಂದ್ರ ಶಿವಾಚಾರ್ಯರು ಶ್ರೀಶೈಲವಲ್ಲಿ ಸೂರ್ಯಸಿಂಹಾಸನಾಸೀನರಾಗಿ ವಿರಾಜಿಸಿದುದು ಸುಪ್ರಸಿದ್ಧವಾಗಿದೆ. ವಚನಕಾರರಲ್ಲಿ ಅಗ್ರಗಣ್ಯರೆನಿಸಿದ್ದ ದೇವರ ದಾಸಿಮಾರ್ಯರು ಶ್ರೀ ಜಗದ್ಗುರು ಚಂದ್ರಗುಂಡ ದೇಶಿಕೇಂದ್ರರ ಶಿಷ್ಯರೆಂಬುದರಿಂದ ಈ ಪೀಠದ ಹಿರಿಮೆಯು ಸ್ಪಷ್ಟವಾಗಿದೆ. ಜಗದ್ಗುರು ಚಂದ್ರಗುಂಡದೇಶಿಕೇಂದ್ರರು ಶಿಷ್ಯೋದ್ಧಾರಕ್ಕಾಗಿ ದೇಶಸಂಚಾರ ಮಾಡುತ್ತಾ ಗುಯಲೂರು (ಗೂಳೂರು) ನಗರೋದ್ಯಾನದಲ್ಲಿ ತೆಂಗಿನಮರ ಭಿಕ್ಷೆಬೇಡಿದ ಪವಾಡ ಮೆರೆಯಿಸಿ ಅಲ್ಲಿಯ ಭೂಪಾಲನಾಗಿದ್ದ ರಾಜೇಂದ್ರ ಚೋಳನ ಪ್ರಾರ್ಥನೆಯಂತೆ

ಅಲ್ಲಿಯೇ ನೆಲಸಿದರು. ಅವರ ಶಿಷ್ಯರಾದ **ಕರಿಬಸವ ದೇಶಿಕೇಂದ್ರರು** ಈಗಿನ ಪೆನುಗೊಂಡೆ ಸಮೀಪದಲ್ಲಿದ್ದ ಸೋಮಲಾಪುರೋದ್ಯಾನದಲ್ಲಿ ಒಣಗಿದ ಮಾವಿನ ಮರ ಚಿಗುರುವಂತೆ ಮಾಡಿದ ಪವಾಡ ಮೆರೆಯಿಸಿ **ನಿಡುಮಾಮಿಡಿ ಕರಿಬಸವಸ್ವಾಮಿಗಳೆಂದು** ಪ್ರಸಿದ್ಧರಾಗಿ ಅಲ್ಲಿಯ ರಾಜ ಅಚ್ಯುತನ ಪ್ರಾರ್ಥನೆಯಂತೆ ನಿಡುಮಾಮಿಡಿಯಲ್ಲಿಯೂ ತಮ್ಮ ನಿವಾಸವನ್ನೇರ್ಪಡಿಸಿದರು. ಮಹಾ ಮಹಿಮರಾದ ಶ್ರೀ ಕರಿಬಸವ ದೇಶಿಕೇಂದ್ರರು ದೀರ್ಘಜೀವಿಗಳಾಗಿ ಅನೇಕ ವರ್ಷಗಳ ವರೆಗೆ ದಕ್ಷಿಣಭಾರತಾದ್ಯಂತ ಸಂಚರಿಸಿ ಅನೇಕ ಮಹಿಮೆಗಳನ್ನು ಮೆರೆಯಿಸಿದುದಕ್ಕೆ, ಇಂಚಗಿರಿ, ತಡ್ಲಿಗಿ (ಬಿಜಾಪುರ ಡಿ|| ಇಂಡಿ ತಾ||) ಗೆಜ್ಜಿಭಾವಿ (ಹೈದರಾಬಾದು) ಹಾವೇರಿ, ಭಾವಿಹಳ್ಳಿ (ಹೂವಿನ ಹಡಗಲಿ ತಾ||) ನರೇಂದ್ರ (ಧಾರವಾಡ ಡಿ||) ಮಧುರಾ, ಕಂಚಿ, ಮುಂತಾದ ನೂರಾರು ಕಡೆಗಳಲ್ಲಿರುವ ಶಾಖಾಮಠಗಳೇ ನಿದರ್ಶನವಾಗಿವೆ. ಸುಪ್ರಸಿದ್ಧ ಯಾತ್ರಾ ಸ್ಥಳಗಳಲ್ಲಿರುವ **ರಾಚೊಟಿ ವೀರಭದ್ರ** ಮತ್ತು ಹಂಪೆಯ **ಉದ್ಭಾನ ವೀರಭದ್ರ** ಪ್ರತಿಷ್ಠೆಗಳು ಈ ಪೀಠಾಧಿಪತಿಗಳಿಂದ ನಡೆದುವೆಂಬುದಕ್ಕೆ ಪ್ರಾಚೀನಕವಿಗಳ ಉಲ್ಲೇಖಗಳು ಸಾಕ್ಷಿಯಾಗಿವೆ. ಈ ಪೀಠಾಧಿಪತಿಗಳು ಅನೇಕ ಜನಾಂಗದವರಿಗೆ ಶಿವದೀಕ್ಷೆಯನ್ನು ಅನುಗ್ರಹಿಸಿದುದರ ಫಲವಾಗಿ ಆಯಾ ಜನಾಂಗಗಳವರು ಈ ಪೀಠಕ್ಕೆ ಶಿಷ್ಯರಾಗಿರುತ್ತಾರೆ. ಪೂರ್ವಾಚಾರ್ಯರ ಹಾಗೂ ಬಸವಾದಿ ಪ್ರಮಥರ ದಿವ್ಯ ತತ್ವಗಳನ್ನು ಅನುಷ್ಠಾನದಲ್ಲಿ ತಂದು ಸಮಾಜದ ಏಳ್ಗೆಗಾಗಿ ಶ್ರಮಿಸಿದ ಕೀರ್ತಿ ಈ ಪೀಠಕ್ಕೆ ಸಲ್ಲತಕ್ಕುದೆಂದರೆ ಅತಿಶಯೋಕ್ತಿಯಲ್ಲ.

ಇಂಥ ಮಹಿಮಾಯುಕ್ತವಾದ ಪೀಠವು ಒಂದೆರಡು ತಲೆಮಾರುಗಳಲ್ಲಿ ಅನೇಕ ಕಾರಣಗಳಿಂದ ಕಳೆಗುಂದಿದ್ದು ತಮ್ಮ ಪೀಠಾರೋಹಣದ ತರುವಾಯ ಮತ್ತೆ ಉಜ್ವಲಗೊಳ್ಳುತ್ತಾ ಇರುವುದು ಸಂತೋಷಕರವಾಗಿರುತ್ತದೆ.

ಮಹಾಸ್ವಾಮಿಗಳವರು ಪೀಠಾರೋಹಣ ಮಾಡಿದ ಹನ್ನೆರಡು ವರ್ಷಗಳ ಅವಧಿಯಲ್ಲಿ ನಡೆದಿರುವ ಮಹತ್ಕಾರ್ಯಗಳು ಮನನೀಯಗಳಾಗಿವೆ. ತಾವು ಪೀಠಾರೋಹಣ ಮಾಡಿದ ತರುಣದಲ್ಲಿ ಅನೇಕ ಎಡರು ತೊಡರುಗಳನ್ನೆದುರಿಸಿ ಪೂರ್ವಾಚಾರ್ಯರ ಅನುಗ್ರಹದಿಂದಲೂ, ದೃಢಪ್ರಯತ್ನದಿಂದಲೂ ಮಹಾಜನರ ಸಹಕಾರ ಗಳಿಸಿ, ಕೈಬಿಟ್ಟು ಹೋಗಿದ್ದ ಆಸ್ತಿಗಳನ್ನು

ಸ್ವಾಧೀನಪಡಿಸಿಕೊಂಡು, ಶಿಥಿಲವಾದ ಶಾಖಾಮಠಗಳ ಜೀರ್ಣೋದ್ಧಾರ ಮಾಡಿ, ಕರ್ಣಾಟಕ ಆಂಧ್ರ ಮೊಗಲಾಯಿ ಮತ್ತು ತಮಿಳು ನಾಡುಗಳಲ್ಲಿ ಸಕಲ ಬಿರುದಾವಳಿಗಳೊಡನೆ ಸಂಚರಿಸಿ, ಉಜ್ವಲ ಉಪದೇಶ ಭಾಷಣ ಗಳಿಂದ ದರ್ಶನಾನುಗ್ರಹಗಳಿಂದ ನಾಡನ್ನು ಪುನೀತಗೊಳಿಸಿದಿರಿ.

ಸಾಹಿತ್ಯಕ್ಷೇತ್ರದಲ್ಲಿ ತಾವು ಮಾಡಿರುವ ಸೇವೆಯು ಚಿರಸ್ಮರಣೀಯವಾ ಗಿದೆ. ತಮ್ಮ ಅಮೃತ ಹಸ್ತದಿಂದ ಆವಿರ್ಭಸಿರುವ ಅಣ್ಣನ ಬದುಕು, ಅಕ್ಕನ ಬಾಳು, ಸಮ್ಯಜ್ಞಾನಿ ಚನ್ನಬಸವಣ್ಣ, ಮಣಿಕಾಂತಿ, ವಚನಮಂಜರಿ, ವಚನಾಂಜಲಿ, ಗುರುವಿನ ಗೆಲುವು, ಹೆಮ್ಮಗಳು, ಮುಪ್ಪಿನಾರ್ಯರ ಭಾವಪಾತ್ರಗಳು ಮುಂತಾದ ಗ್ರಂಥಗಳು ಸುಪ್ರಸಿದ್ಧ ಸಾಹಿತಿಗಳ ಸಮಾದರ ಗಳಿಸಿ ಸಾಹಿತ್ಯರತ್ನಗಳಾಗಿ ಶೋಭಿಸುತ್ತಿರುವುದು ಮಠಾಧಿಪತಿಗಳ ಇತಿಹಾಸ ದಲ್ಲಿ ಆದರ್ಶವಾಗಿದೆ.

ಭಾರತವು ಸ್ವತಂತ್ರವಾದ ತರುಣದಲ್ಲಿ ತಾವು ತಮ್ಮ ಸಂಸ್ಥಾನದ ಮಠದಲ್ಲಿ ಮೈಸೂರು ಸಂಸ್ಥಾನದ ಮುಖ್ಯಮಂತ್ರಿಗಳಾದ ಶ್ರೀ ಕೆ. ಚಂಗಲರಾಯ ರೆಡ್ಡಿಯವರ ನೇತೃತ್ವದಲ್ಲಿ ಹರಿಜನರಿಗೆ ಪ್ರವೇಶಾಧಿಕಾರ ದೊರಕಿಸಿಕೊಟ್ಟದು ತಮಗಿರುವ ರಾಷ್ಟ್ರ ಹಾಗೂ ಜನತಾಭಿಮಾನಗಳನ್ನು ಪ್ರಕಾಶಪಡಿಸುತ್ತದೆ. ತಾವು ಗೋರೀಬಿದನೂರಿನಲ್ಲಿ ತೆರೆದಿರುವ ಸಾರ್ವ ಜನಿಕ ಮಹಾಜನ ವಿದ್ಯಾರ್ಥಿನಿಲಯವು ಇದನ್ನು ದೃಢಪಡಿಸುತ್ತದೆ.

ಕೇವಲ ಹನ್ನೆರಡು ವರ್ಷಗಳ ಅಲ್ಪಾವಧಿಯಲ್ಲಿ ತಮ್ಮ ಅಧ್ಯಕ್ಷತೆಯಲ್ಲಿ ನಡೆದ ಅನೇಕ ಸಭೆಗಳೂ, ಸಮ್ಮೇಳನಗಳೂ ಹೇರಳವಾಗಿವೆ. ಪ್ರಗತಿ ಪರವಾದ ಮನೋಭಾವ, ಸುಭಗವಿಚಾರ, ಪವಿತ್ರಕಾರ್ಯಾಚರಣೆ, ನಿರ್ಮಲ ಚಾರಿತ್ರ್ಯಗಳಿಂದ ತಾವು ನಾಡಿಗೆ ಅಲಂಕಾರಪ್ರಾಯರಾಗಿರುತ್ತೀರಿ. ಆರ್ಯ ಗುರುವರ್ಯರೂ ದಯಾಮಯನಾದ ಪರಮೇಶ್ವರನೂ ತಮಗೆ ದೀರ್ಘಾಯು ರಾರೋಗ್ಯ ಸೌಭಾಗ್ಯಗಳನ್ನು ಅನುಗ್ರಹಿಸಿ ತಮ್ಮಿಂದ ಇನ್ನೂ ಇತೋಪ್ಯತಿ ಶಯವಾದ ಮಹತ್ಕಾರ್ಯಗಳು ನಡೆದು ನಿಡುಮಾಮಿಡಿ ಶ್ರೀ ಶೈಲಪೀಠದ ಯಶಸ್ಸು ದಿಗಂತ ವಿಶ್ರಾಂತವಾಗುವಂತೆ ಕರುಣಿಸಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

---

ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಜಗದ್ಗುರು
ಚನ್ನಬಸವರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು
೧೨ನೇ ವಾರ್ಷಿಕೋತ್ಸವ ಸಂದರ್ಭದಲ್ಲಿ ಅರ್ಪಣೆಕೊಡಿಸಿದ

# ಸೊಲ್ನುಡಿಗಳು!

ಹನ್ನೆರಡು ವರುಷದ ಹಬ್ಬವಿದಯ್ಯ.
ಹಬ್ಬ ಬರಿಯ ಪೀಠದ್ದಲ್ಲ ಕಂಡಯ್ಯ.
ಸಮಾಜಕ್ಕೂ ಸಂದುದಯ್ಯ.
ಸಮಾಜವೆಂಬ ಶರೀರಕ್ಕೆ ಶ್ರೀಪೀಠವೆ ಚೈತನ್ಯ ಕಂಡಯ್ಯ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ. ೧

ಸಮಾಜವೆನೆ ವಿಶೇಷ ಧಾರ್ಮಿಕವೆಂದೆನ್ನದಿರಯ್ಯ.
ಧರ್ಮ ನೀತಿ ವಿದ್ಯೆ ಭಾಷೆ ಕಲೆಗಳಲ್ಲಿ ಆದರಾಸಕ್ತಿಯುಳ್ಳವರು
ಆರಾದಡಾಗಲಿ ಅವರುಳ್ಳುದೇ ಸಮಾಜವಂಬೆವಯ್ಯ.
ಅಂತಪ್ಪ ಸಮಾಜಕ್ಕೆ ಉತ್ತೇಜಕವಪ್ಪುದೆ,
ಶ್ರೀಗುರು ಪೀಠವಯ್ಯ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ. ೨

ಇಂದು ನಿಡುಮಾಮಿಡಿಯ ಶ್ರೀಗಿರಿ
ಪೀಠದ ಪರ್ವದಿನ.
ಶ್ರೀಗಿರಿಯೆನೆ ಸಾರಸ್ವತ ಶ್ರೀಗಿರಿಯೆಂಬೆವಯ್ಯ.
ಶ್ರೀಗಿರಿಯೆನೆ ಸಾಂಪತ್ತಿಕ ಶ್ರೀಗಿರಿಯೆಂಬೆವಯ್ಯ.
ಶ್ರೀಗಿರಿಯೆನೆ ಶಾಕ್ತಿಕ ಶ್ರೀಗಿರಿಯೆಂಬೆವಯ್ಯ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ. ೩

ಶ್ರೀಗಿರಿ ಪೀಠವೆನೆ ವಿದ್ಯಾಪೀಠವಾಗಿ–ಶ್ರೀಪೀಠ
ವಾಗಿ–ಶಕ್ತಿಪೀಠವಾಗಿ ಶೋಭಿಸಬಲ್ಲಡೆ ಅದೇ ಶ್ರೀಗಿರಿ

ಪೀಠವಯ್ಯ. ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ-
ಸಿಂಹಾಸನಾಧೀಶ್ವರ, ಅಂತಾಗಲೆಂದೆ ಹಗಲಿರುಳು ತಪಿಸುವೆನಯ್ಯ. ೪

ಸಮಾಜೋನ್ನತಿಗೆ ವಿದ್ಯೆ ಸಂಪತ್ತು ಶಕ್ತಿಗಳು
ಮೂಲ ಜೀವಾಳವಯ್ಯ.
ಇವಿಲ್ಲದ ಸಮಾಜ ನಿರ್ಜೀವ ಸಮಾಜವಯ್ಯ.
ಇವನೆ ಕರುಣಿಸಯ್ಯ.
ಇದುವೆ ಈ ಶುಭದಿನದ ಕೋರಿಕೆಯಯ್ಯ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ. ೫

ಸಮಾಜೋನ್ನತಿಯೆ ಶ್ರೀಗಿರಿಪೀಠದ ಉನ್ನತಿ.
ಸಮಾಜ ಸುಸ್ಥಿತಿಯೆ ಶ್ರೀಗಿರಿಪೀಠದ ಸುಸ್ಥಿತಿ.
ಸಮಾಜ ಸುಗತಿಯೆ ಶ್ರೀಗಿರಿಪೀಠದ ಸುಗತಿ, ಕಂಡಯ್ಯ.
ಸಮಾಜವಿಲ್ಲದ ಶ್ರೀಗಿರಿಪೀಠದಿಂಡೇನು ಹೇಳಾ ?
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ
ಅಂಗವಿಲ್ಲದ ಆತ್ಮದಿಂದೇನಪ್ಪುದಯ್ಯ. ೬

ಅಂಗವಿರೆ ಆತ್ಮನ ಆಟ.
ಅಂಗವಿರೆ ಆತ್ಮನ ನೋಟ.
ಅಂಗವಿರೆ ಆತ್ಮನ ಬೇಟ.
ಅಂಗ ಆತ್ಮಗಳು ಒಂದಾಗಿರೆ ಭೋಗ–ಮೋಕ್ಷಗಳು,
ಜ್ಞಾನ–ವಿಜ್ಞಾನಗಳು, ಭಾವ–ಅನುಭಾವಗಳು ಕಂಡಯ್ಯ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ. ೭

ಇದು ಸಮಾಜ ಶ್ರೀಗಿರಿಗಳ ಸಂಬಂಧವಯ್ಯ.
ಇದು ಶ್ರೀಗಿರಿಪೀಠದ ನಿಜಧ್ಯೇಯವಯ್ಯ.
ಇದಕ್ಕಾಗಿ ಹತ್ತೆರಡು ವರುಷಗಳಿಂದ ಪೀಠವು
ಅವಿಶ್ರಾಂತವಾಗಿ ಯತ್ನಿಸಿದೆಯಯ್ಯ.
ಯಥಾಶಕ್ತಿ ಯತ್ನಿಸುವದಯ್ಯ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ. ೮

ಒಲಿದು ಹದುಳತೆಯ ಕೊಡಲಿ.
ಕೊಡದಿದ್ದರೆ ಇಂದೇ ಮುಕ್ತನ ಮಾಡಲಿ.
ಬಿಡೆ ಬಿಡೆವಯ್ಯ ಸಾಹಿತ್ಯಸೇವೆಯ.
ಬಿಡೆ ಬಿಡೆವಯ್ಯ ಸತ್ಯಪಂಥವ.
ಬದುಕಿಸು–ಬೆರಸು ನಿಮ್ಮ ಧರ್ಮ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ. ೯

ಸಮಾಜ ಅರಿದು ಮಾನಿಸಲಿ.
ಮಾನಿಸದೆ ಬಿಡಲಿ.
ಸನುತಾಚಾರವೆ ಎಮಗೆ ಜೀವಾಳವಯ್ಯ.
ಸಹಜವಿಚಾರವೆ ಎಮಗೆ ಸ್ವಭಾವವಯ್ಯ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ
ನೀವು ಸಮಾಜ ಜೀವಿಗಳೆಂಬುದ ಅರಿದೆವಾಗಿ! ೧೦

ಮಹಾತ್ಮರು ಅಹಿಂಸೆಯನಾರಾಧಿಸಿ
ಹಿಂಸೆಗೊಳಗಾದುದ ಬಲ್ಲೆವಯ್ಯ.
ಅರವಿಂದರು ಯೋಗವನಾರಾಧಿಸಿ
ವಿಯೋಗಕ್ಕೊಳಗಾದುದ ಬಲ್ಲೆವಯ್ಯ.
ರಮಣಋಷಿಗಳು ರಹಸ್ಯವನಾರಾಧಿಸಿ
ಮರಣಕ್ಕೊಳಗಾದುದ ಬಲ್ಲೆವಯ್ಯ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ
ನಿಮ್ಮನಾರಾಧಿಸುವ ಎಮಗೆ ನೀವೇನನಿತ್ತಡೆಯೂ
ಅದೇ ಮಹಾಪ್ರಸಾದವಯ್ಯ. ೧೧

ಹನ್ನೆರಡನೆಯ ಒಸಗೆಯ ಯೋಗ
ಕನ್ನಡದ ಈ ಹಿರಿಯೂರಿನಲ್ಲಿ ಕಲೆತು ಬಂದು,
ಸಜ್ಜನರ ಸದನದಲಿ ಸೇರಿನಿಂದು,
ಭಕ್ತಿಭರಿತ–ಧರ್ಮನಿರತರ,
ರಾಜಕಾರಣಿಗಳ–ಸಾಹಿತಿ ಶಿರೋಮಣಿಗಳ,

ಕಾರ್ಯಕುಶಲರ–ಕಲಾಕೋವಿದರ
ಕಾಯವಾಙ್ಮನ ಸೇವೆಯ ಸವಿಯನುಂಡು
ಸಂತಸಗೊಂಡೆವಯ್ಯ ಶ್ರೀ ನಿಡುಮಾಮಿಡಿ
ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ. ೧೨

ಈರಾರರ ಈ ಒಸಗೆಯಲ್ಲಿ ನೆರೆದ
ಸಾಹಿತಿಗಳೆಲ್ಲ ಸಮಾಜದ ವಿದ್ಯಾಶಕ್ತಿ.
ಧಾರ್ಮಿಕರೆಲ್ಲ ಸಂಪತ್‌ಶಕ್ತಿ.
ಅನುಭಾವಿಗಳೆಲ್ಲ ಆತ್ಮಶಕ್ತಿ
ಮಕ್ಕಳೆಲ್ಲ ಪ್ರಾಣಶಕ್ತಿ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ
ಶ್ರೀಗುರುವೆನ್ನ ಓಂಕಾರಶಕ್ತಿ. ೧೩

ಬೆಳ್ಳನೆ ಬೆಳಗುತಿವೆ ವಿದ್ಯುದ್ದೀಪಗಳು.
ಮಿರ್ರನೆ ಮಿಂಚುತಿವೆ ಬಣ್ಣದ ಕಂಬಗಳು.
ಕೆನ್ನನೆ ಕಂಗೊಳಿಸುತಿದೆ ಓಲಗದ ಮನೆ.
ಒಪ್ಪುವ ಓಲಗದಲ್ಲಿ ಅಸಂಖ್ಯಾತ ಸಭ್ಯರು, ಸ್ತ್ರೀಯರು,
ಬಾಲರು– ಬಾಲಕಿಯರು ನೋಡಾ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ. ೧೪

ಶ್ರೇಯಸಾಗಲಿ ಸಕಲ ಸಮಾಜಕ್ಕೆ.
ಶ್ರೇಯಸಾಗಲಿ ಶ್ರೀಗಿರಿ ಪೀಠಕ್ಕೆ
ಶ್ರೇಯಸಾಗಲಿ ಸಿರಿಗನ್ನಡಾಂಬೆಗೆ
ಶ್ರೇಯಸಾಗಲಿ ಸ್ವತಂತ್ರಭಾರತಾವನಿಗೆ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ
ಶ್ರೇಯಸಾಗಲಿ ವಿಶಾಲ ವಿಶ್ವಕ್ಕೆ ! ೧೫

ಶಿವಂ ಭೂಯಾತ್

---

# ಮೊದಲನೆಯ ದಿನದ ಕಾರ್ಯಕಲಾಪಗಳು

ದಿನಾಂಕ ೨೭-೬-೫೧ನೇ ಬುಧವಾರ ಪ್ರಾತಃಕಾಲ ೯ ಘಂಟೆಗೆ ಬೆಂಗಳೂರು ನಗರದ ವಿಶ್ವೇಶ್ವರಪುರಂ ಧರ್ಮಪ್ರಕಾಶ ಶ್ರೀ ಎಸ್. ಸಜ್ಜನರಾಯರವರ ಕಲ್ಯಾಣಮಂಟಪದಲ್ಲಿ ಶ್ರೀ ನಿಡುಮಾಮಿಡಿ ಶ್ರೀ ಶೈಲ ಜಗದ್ಗುರುಗಳವರ ೧೨ನೆಯ ವಾರ್ಷಿಕೋತ್ಸವ ಸಮಾರಂಭವು ಆರಂಭವಾಯಿತು. ಈ ಮಹೋತ್ಸವಕ್ಕೆ ಕರ್ಣಾಟಕ, ಆಂಧ್ರ, ಹೈದರಾಬಾದು ಮತ್ತು ತಮಿಳು ಪ್ರಾಂತಗಳಿಂದ ಅನೇಕ ಮಂದಿ ಪೀಠದ ಶಿಷ್ಯರೂ ಅಭಿಮಾನಿಗಳೂ ಆಗಮಿಸಿದ್ದರು. ಸಖರಾಯಪಟ್ಟಣದ ಶ್ರೀ ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರು ದಯಮಾಡಿಸಿದ್ದರು. ಈ ಮಹಾ ಸಭೆಯು ಮೈಸೂರು ಸಂಸ್ಥಾನದ ನಿವೃತ್ತ ವಿದ್ಯಾಸಚಿವರಾದ ಶ್ರೀ ಡಿ. ಎಚ್. ಚಂದ್ರಶೇಖರಯ್ಯ ಬಿ.ಎ., ಎಲ್.ಎಲ್.ಬಿ., ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಮೈಸೂರು ಬ್ಯಾಂಕಿನ ಮಾಜಿ ಚೇರ್ಮನ್ನರಾದ ಶ್ರೀ ತೂಬಗೆರೆ ನಂಜಪ್ಪನವರು ಸ್ವಾಗತ ಭಾಷಣ ಮಾಡಿ ಸರ್ವರಿಗೂ ಸುಸ್ವಾಗತ ಬಯಸಿದರು. ಕನ್ನಡ ಹಿರಿಯ ಸಾಹಿತಿಗಳಾದ ರಾಜಸೇವಾಪ್ರಸಕ್ತ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಎಂ.ಎ., ಅವರು ಉತ್ಸವದ ಪ್ರಾರಂಭ ಭಾಷಣ ಮಾಡಿದರು. ಮೈಸೂರಿನ ಆಸ್ಥಾನ ಸಂಗೀತ ವಿದ್ವಾನ್ ಶ್ರೀ ಶಿವರುದ್ರಪ್ಪನವರ ಸುಶ್ರಾವ್ಯವಾದ ಸಂಗೀತವಾದನವಾದ ಮೇಲೆ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾದ ಶ್ರೀ ಕೆ. ಎಸ್. ಧರಣೇಂದ್ರಯ್ಯನವರು ಎಂ.ಎ., ಬಿ.ಟಿ., ಅವರು 'ಮಠಗಳೂ ಮತ್ತು ಸಾಹಿತ್ಯ' ಎಂಬ ವಿಷಯವಾಗಿಯೂ ಅ|| ಪಬ್ಲಿಸಿಟಿ ಆಫೀಸರವರಾದ ಶ್ರೀ ಜೀರಗೆ ಕಟ್ಟಿ ಬಸವಪ್ಪನವರು ಬಿ.ಎ., ಅವರು 'ಮಠಗಳ ಕರ್ತವ್ಯ' ಎಂಬ ವಿಷಯವಾಗಿಯೂ ಭಾಷಣ ಮಾಡಿದರು. ಅಧ್ಯಕ್ಷರು ಶ್ರೀಗಳವರ ಸಾಹಿತ್ಯ ಸೇವೆಯನ್ನು ಪ್ರಶಂಸಿಸಿ ಅವರ ಸೇವೆಯು ಆದರ್ಶವಾದುದೆಂದು ನುಡಿದರು.

ಅದೇ ಮಧ್ಯಾನ್ಹ ೩ ಘಂಟೆಗೆ ಷ|| ಬ್ರ|| ಶ್ರೀ ಪಟ್ಟಾಧ್ಯಕ್ಷ ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರು 'ಪುರಾಣ ಸಾಹಿತ್ಯದಲ್ಲಿ ಆಧ್ಯಾತ್ಮಿಕ ದೃಷ್ಟಿ' ಎಂಬ ವಿಚಾರವಾಗಿ ಪ್ರವಚನ ನಡೆಸಿದರು.

ಸಂಜೆ ೬ ಗಂಟೆಗೆ ಸಭೆಯು ಆರಂಭವಾಯಿತು. ವಿದ್ವಾಂಸರ ಭಾಷಣಗಳನ್ನೇರ್ಪಡಿಸಿತ್ತು. ಹೈಕೋರ್ಟಿನ ನ್ಯಾಯಮೂರ್ತಿಗಳಾದ ಶ್ರೀ ಟಿ. ಎನ್. ಮಲ್ಲಪ್ಪನವರು ಬಿ.ಎ., ಎಲ್.ಎಲ್.ಬಿ., ಅವರು ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿ ಶಕುಂತಳಾಬಾಯಿ ಪಾಂಡುರಂಗರಾವ್ ಅವರು ಪ್ರಭುಲಿಂಗಲೀಲೆಯಲ್ಲಿ 'ಅಲ್ಲಮಪ್ರಭು ಸಿದ್ಧರಾಮೇಶ್ವರ ಸಂವಾದ' ಎಂಬ ಭಾಗವನ್ನು ಗಮಕ ರೀತಿಯಲ್ಲಿ ಸುಶ್ರಾವ್ಯವಾಗಿ ಹಾಡಿದರು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅ|| ಪ್ರೊಫೆಸರಾದ ಶ್ರೀ ಟಿ. ಎನ್. ಶ್ರೀಕಂಠಯ್ಯನವರು ಎಂ.ಎ., ಅವರು 'ವಚನಗಳಲ್ಲಿ ಕಾವ್ಯಸೌಂದರ್ಯ' ಎಂಬ ವಿಚಾರವಾಗಿಯೂ, ರಾಜಸೇವಾಸಕ್ತ ಶ್ರೀ ಸಿ. ಕೆ. ವೆಂಕಟರಾಮಯ್ಯನವರು ಎಂ.ಎ. ಎಲ್.ಎಲ್.ಬಿ., ಅವರು ಶ್ರೀಗಳವರ 'ಅಣ್ಣನ ಬದುಕು' ಎಂಬ ಗ್ರಂಥದ ವಿಚಾರವಾಗಿಯೂ ಭಾಷಣ ಮಾಡಿದರು. ಅಧ್ಯಕ್ಷರು 'ಉಪನಿಷತ್ತು-ಶಿವಾದ್ವೈತ' ಎಂಬ ವಿಷಯವಾಗಿ ಮನನೀಯ ಭಾಷಣ ಮಾಡಿದರು.

---

# ಎರಡನೆಯ ದಿನದ ಕಾರ್ಯಕಲಾಪಗಳು

ತಾ|| ೨೮-೬-೫೧ನೇ ಗುರುವಾರ ಬೆಳಿಗ್ಗೆ ೯ ಗಂಟೆಗೆ ಗ್ರಂಥ ಪ್ರಕಟನೋತ್ಸವ ನಡೆಯಿತು. ವಿದ್ಯಾ ಇಲಾಖೆಯ ಡೈರೆಕ್ಟರವರಾದ ಶ್ರೀ ಕೆ. ಗುರುದತ್ ಬಿ.ಎ.,ಎಂ.ಸಿ.ಎಸ್. ಅವರು ಅಧ್ಯಕ್ಷತೆ ವಹಿಸಿದ್ದರು. ಗಮಕಿ ಶ್ರೀ ರಾಘವೇಂದ್ರರಾಯರು ಕುಮಾರ ವ್ಯಾಸ ಭಾರತದಿಂದ (ಪರಮೇಶ್ವರ ಸಾಕ್ಷಾತ್ಕಾರ) ಕಾವ್ಯ ವಾಚನ ಮಾಡಿದರು. ಶ್ರೀಗಳವರ 'ಮಣಿಕಾಂತಿ' (ಸಿದ್ಧಾಂತ ಶಿಖಾಮಣಿ ಅನುವಾದ) ಎಂಬ ಗ್ರಂಥವನ್ನು ಆಸ್ಥಾನವಿದ್ವಾನ್ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರೂ 'ವಚನಮಂಜರಿ' ಎಂಬ ಗ್ರಂಥವನ್ನು ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳು ಬಿ.ಎ., ಅವರೂ ವಾರ್ಷಿಕೋತ್ಸವ ಸಮಿತಿಯ ಪರವಾಗಿ ಶ್ರೀ ಅ. ನ. ಕೃಷ್ಣರಾಯರು ಬರೆದಿರುವ 'ಶ್ರೀ ನಿಡುಮಾಮಿಡಿ ಸನ್ನಿಧಿಯುವರು' ಎಂಬ ಗ್ರಂಥವನ್ನು ಶ್ರೀ ದೇವುಡು ನರಸಿಂಹ ಶಾಸ್ತ್ರಿಗಳು ಎಂ.ಎ., ಅವರೂ ಪ್ರಕಟನ ಮಾಡಿದರು. ಬೆಂಗಳೂರು ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ಪಂಡಿತರಾದ ಕವಿಶೇಖರ ಶ್ರೀ ಹೆಚ್. ವಿ. ನಾರಾಯಣ ಶಾಸ್ತ್ರಿಗಳು ಸಂಸ್ಕೃತದಲ್ಲಿ ಬರೆದಿರುವ 'ಶ್ರೀ ಶೈಲ ಜಗದ್ಗುರು ವಿಲಾಸ ಮಹಾಕಾವ್ಯ'ವನ್ನು ಜಗದ್ಗುರುಗಳವರಿಗೆ ಸಮರ್ಪಿಸಿದರು. ಅಧ್ಯಕ್ಷರು ಶ್ರೀಗಳವರ ಸಾಹಿತ್ಯ ಸೇವೆಯನ್ನು ಪ್ರಶಂಸಿಸಿದರು.

ಮಧ್ಯಾಹ್ನ ೩ ಗಂಟೆಗೆ ಪಟ್ಟಾಧ್ಯಕ್ಷ ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ 'ಅನುಭವ ಗೋಷ್ಠಿ' ನಡೆಯಿತು.

ಸಂಜೆ ೬-೧೫ ಗಂಟೆಗೆ ವಾರ್ಷಿಕೋತ್ಸವವು ನಡೆಯಿತು. ಮೈಸೂರು ಸಂಸ್ಥಾನದ ರೆವಿನ್ಯೂ ಸಚಿವರಾದ ಶ್ರೀ ಹೆಚ್. ಸಿದ್ದಯ್ಯನವರು ಬಿ.ಎ.,ಎಲ್.ಎಲ್.ಬಿ. ಅವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ೧೦೮ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ವೇದಘೋಷವಾಗುತ್ತಿರಲು ಸಿಂಹಾಸನಾರೋಹಣ ಮಾಡಿದರು.

ಈ ಮಹೋತ್ಸವಕ್ಕೆ ನಮ್ಮನ್ನಾಳುವ ಶ್ರೀಮನ್ಮಹಾರಾಜರವರು ಕಳುಹಿಸಿದ್ದ ಶುಭ ಸಂದೇಶವನ್ನು ಓದಲಾಯಿತು. ತರುವಾಯ ಮುಖ್ಯ ಮಂತ್ರಿಗಳೂ, ಗದಗ ದಾನಶೂರ ಶ್ರೀ ಬಸರೀಗಿಡದ ವೀರಪ್ಪನವರೇ ಮುಂತಾದವರು ಸಂದೇಶಗಳನ್ನು ಕಳುಹಿಸಿದ್ದರು. ಶ್ರೀ ಲಕ್ಷ್ಮೀನರಸಿಂಹ ಶಾಸ್ತ್ರಿಗಳು ಮತ್ತು ವಿಮರ್ಶವಿಶಾರದ ಶ್ರೀ ಜಿ. ಟಿ. ಅಕ್ಕುಲಯ್ಯ ದೀಕ್ಷಿತರು ಪದ್ಯ-ಗದ್ಯ ಮಾಲಿಕೆಗಳನ್ನು ಪಠಿಸಿದರು. ವಚನಗಾಯನ ಪ್ರವೀಣ ಶ್ರೀ ಸಿ. ವಿ. ನಾಗರಾಜ್‌ರವರ ಸಂಗೀತವಾದ ಮೇಲೆ ವಾರ್ಷಿಕೋತ್ಸವ ಸಮಿತಿ ಅಧ್ಯಕ್ಷರಾದ ಶ್ರೀ ತೂಬುಗೆರೆ ನಂಜಪ್ಪನವರು ಪೀಠದ ಶಿಷ್ಯರು ಮತ್ತು ಮಹಾಜನರ ಪರವಾಗಿ ಜಗದ್ಗುರುಗಳವರಿಗೆ ಬಿನ್ನವತ್ತಳೆಯನ್ನು ಒಪ್ಪಿಸಿದರು. ಕಾಣಿಕೆ ಸಮರ್ಪಣೆ ಕಾರ್ಯಕ್ರಮ ಚಿರಸ್ಮರಣೀಯವಾಗಿತ್ತು. ನಾನಾ ಪ್ರಾಂತಗಳಿಂದ ಬಂದಿದ್ದ ಶಿಷ್ಯ ಸಮೂಹವು ಅಹಮಹಮಿಕೆಯಿಂದ ಕಾಣಿಕೆಯನ್ನು ಒಪ್ಪಿಸಿತು. ಶ್ರೀ ಅ. ನ. ಕೃಷ್ಣರಾಯರವರು 'ಧರ್ಮ ಸಮನ್ವಯ' ಎಂಬ ವಿಷಯವಾಗಿಯೂ ಪ್ರಜಾಮತ ಸಂಪಾದಕರಾದ ಶ್ರೀ ಎಂ. ಎಸ್. ಗುರುಪಾದಸ್ವಾಮಿಯವರು 'ಮಠಗಳು ಮತ್ತು ಸಮಾಜ' ಎಂಬ ವಿಷಯವಾಗಿಯೂ ಭಾಷಣ ಮಾಡಿದರು. ಶ್ರೀ ಕೆ.ಆರ್. ಲಿಂಗಪ್ಪನವರ ಪದ್ಯವಾಚನ, ಪುರಾಣಪ್ರವೀಣ ಶ್ರೀ ಮಹದೇವಪ್ಪನವರ ಕೀರ್ತನಗಳಾದ ಮೇಲೆ ಸಂಸ್ಥಾನದ ಪದ್ಧತಿಯ ಪ್ರಕಾರ ನಡೆದ ಪಂಡಿತ ಸನ್ಮಾನ, ಪ್ರಶಸ್ತಿ ಪ್ರದಾನ ಕಾರ್ಯಕ್ರಮವು ದರ್ಶನೀಯವಾಗಿತ್ತು. ಅಧ್ಯಕ್ಷರು ವಾರ್ಷಿಕೋತ್ಸವ, ಗುರುಗಳ ಕರ್ತವ್ಯ, ನಿಡುಮಾಮಿಡಿ ಮಠದ ಹಿರಿಮೆ ಮತ್ತು ಶ್ರೀಗಳವರ ಆದರ್ಶ ಕಾರ್ಯಗಳ ಬಗ್ಗೆ ಪ್ರಸ್ತಾಪಿಸಿ ಶ್ರೀಗಳವರ ಧ್ಯೇಯಗಳು ಇತೋಪ್ಯತಿಶಯವಾಗಿ ಬೆಳೆದು ಬೆಳಗಲೆಂದು ಪ್ರಾರ್ಥಿಸಿದರು. ಜಗದ್ಗುರುಗಳವರು ತಮ್ಮ ಅಮೃತವಾಣಿಯಿಂದ ಗುರುಗಳ ಕರ್ತವ್ಯವನ್ನು ಪ್ರಸ್ತಾಪಿಸಿ, ಇಡೀ ಮಾನವರ ಸೇವೆ, ಸಾಹಿತ್ಯ ಸಂಸ್ಕೃತಿ ಸಂರಕ್ಷಣೆಯೇ ತಮ್ಮ ಧ್ಯೇಯವೆಂದು ಅಪ್ಪಣೆ ಕೊಡಿಸಿದರು. ಉತ್ಸವದ ಸಂದೇಶ ರೂಪವಾದ ಶ್ರೀಗಳವರ 'ಸೂಳ್ನುಡಿ' ಪಠನವಾದ ಮೇಲೆ ವಂದನಾರ್ಪಣೆ, ರಾಜಾಶೀರ್ವಾದ, ಮತ್ತು ರಾಷ್ಟ್ರಗೀತೆಯೊಡನೆ ಸಭೆ ಮುಕ್ತಾಯವಾಯಿತು.

---

## ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ
## ಶ್ರೀ ೧೦೮ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ
## ಮಹಾಸ್ವಾಮಿಗಳವರ

### ೧೨ನೇ ವಾರ್ಷಿಕೋತ್ಸವ ಮಹಾಸವಾರಂಭ, ಬೆಂಗಳೂರು.



ಎಡಗಡೆಯಿಂದ (ಆಸನಾರೂಢರಾಗಿ)—(೧) ಶ್ರೀ ಷ॥ ಸದಾಶಿವಶಿವಾಚಾರ್ಯ ಸ್ವಾಮಿಗಳವರು. (೨) ಶ್ರೀ ಜಗದ್ಗುರುಗಳವರು. (೩) ಆಸ್ಥಾನ ವಿದ್ವಾನ್ ಷಂ॥ ಶಿವಕುಮಾರ ಸ್ವಾಮಿಗಳು.

ಕುಳಿತಿರುವವರು—(೧) ಶ್ರೀ ಕೆ. ಎಸ್. ಧರಣೇಂದ್ರಯ್ಯನವರು. (೨) ಆಸ್ಥಾನ ವಿದ್ವಾನ್ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು. (೩) ಶ್ರೀ ಟಿ. ಎಚ್. ಎಂ. ಚಂದ್ರಶೇಖರಶಾಸ್ತ್ರಿಗಳು, ಬಳ್ಳಾರಿ. (೪) ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳು.

ನಿಂತಿರುವವರು—(೧) ಶ್ರೀ ವೀರಬಸಪ್ಪಶೆಟ್ಟರು, ಕೊಪ್ಪಳ. (೨) ಶ್ರೀ ಜೀರಿಗೆ ಬಸವಪ್ಪನವರು. (೩) ಗುರುಭಕ್ತಭೂಷಣ ಶ್ರೀಮಲ್ಲಿಕಾರ್ಜುನಗೌಡರು, ಅಡ್ನೂರು. (೪) ಗುರುಸೇವಾಧುರೀಣ ಶ್ರೀ ಪಂಪಣ್ಣಶೆಟ್ಟರು, ಕೊಪ್ಪಳ. (೫) ಚೆನ್ನಿಗಾವಿ ಶ್ರೀ ಚನ್ನವೀರಪ್ಪನವರು, ಬಿಜಾಪುರ. (೬) ತ್ಯಾಗವೀರ ಶ್ರೀಶಿವಶಂಕರಪ್ಪನವರು, ಬಾಗಲಕೋಟೆ.

ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ
ಶ್ರೀ ೧೦೮ ಜಗದ್ಗುರು ಚೆನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ
ಮಹಾಸ್ವಾಮಿಗಳವರ
೨೫ನೇ ವಾರ್ಷಿಕೋತ್ಸವ ಮಹಾಸಮಾರಂಭ, ಬೆಂಗಳೂರು.



ಎಡಗಡೆಯಿಂದ (ಆಸನಾರೂಢರಾಗಿ)—(೧) ಶ್ರೀ ಪ|| ಸದಾಶಿವ ಶಿವಾಚಾರ್ಯ ಸ್ವಾಮಿಗಳು, ಸಖರಾಯಪಟ್ಟಣ. (೨) ಶ್ರೀ ಜಗದ್ಗುರುಗಳವರು.

ವೇದಿಕೆ ಮೇಲೆ—(೧) ಶ್ರೀ ಸಂಗಣ್ಣನವರು, ಕೊಪ್ಪಳ. (೨) ಚಿ|| ಸಿದ್ದಣ್ಣ. (೩) ಶ್ರೀ ಕು|| ಸದಾಶಿವಪ್ಪ. (೪) ಗುರುಸೇವಾಧುರೀಣ ಶ್ರೀ ಪಂಪಣ್ಣ ಶೆಟ್ಟರು, ಕೊಪ್ಪಳ. (೫) ಗುರುಭಕ್ತಭೂಷಣ ಶ್ರೀ ಮಲ್ಲಿಕಾರ್ಜುನಗೌಡರು, ಅಡ್ಡೂರು. (೬) ತ್ಯಾಗವೀರ ಶಿವಶಂಕರಪ್ಪನವರು ಚಿತ್ತರಗಿ (ಬಾಗಲಕೋಟೆ).

ನಿಂತಿರುವವರು—(೧) ಶ್ರೀ ಚನ್ನವೀರಪ್ಪನವರು, ಚೆನ್ನಿಗಾವಿ, ಬಿಜಾಪುರ. (೨) ಧರ್ಮಕಾರ್ಯನಿರತ ಶ್ರೀ ಎಚ್. ನಂಜುಂಡಯ್ಯನವರು. (೩) ಶ್ರೀ ಸಿದ್ದಪ್ಪನವರು, ಕೊಪ್ಪಳ. (೪) ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರು. (೫) ವಿಮರ್ಶವಿಶಾರದ ಶ್ರೀ ಜಿ.ಟಿ. ಅಕ್ಕುಲಯ್ಯ ದೀಕ್ಷಿತರು. (೬) ಶ್ರೀ ಎಂ. ಗುರುಬಸವಾರಾಧ್ಯರು, ಹಿಂದೂಪುರ.

## ಪ್ರಶಸ್ತಿ ಪಡೆದ ಮಹನೀಯರು.

೧. ಧರ್ಮಕಾರ್ಯಕುಶಲ

ಶ್ರೀ ತೂಬಗೆರೆ ನಂಜಪ್ಪನವರು, ಮೈಸೂರು ಬ್ಯಾಂಕಿನ ಮಾಜಿ ಛೇರ್ಮನ್ನರು, ಮೈಸೂರು ಲಿಂಗಾಯಿತ ಎಜುಕೇಷರ್ನಫಂಡ್ ಅಸೋಸಿಯೇಷನ್ ಮತ್ತು ಬೇಲೀಮಠದ ಟ್ರಸ್ಟ್ ಕಮಿಟಿ ಮುಂತಾದ ಅನೇಕ ಧರ್ಮಸಂಸ್ಥೆಗಳ ಪ್ರೆಸಿಡೆಂಟರು.

೨. ಗುರುಭಕ್ತಭೂಷಣ

ಶ್ರೀ ಮಲ್ಲಿಕಾರ್ಜುನಗೌಡರು, ಅಡ್ನೂರು, ಧಾರವಾಡ ಡಿಸ್ಟ್ರಿಕ್ಟ್.

೩. ಗುರುಸೇವಾಧುರೀಣ

ಶ್ರೀ ಪಂಪಣ್ಣಶೆಟ್ಟರು, ಕೊಪ್ಪಳ.

೪. ತ್ಯಾಗವೀರ

ಶ್ರೀ ಶಿವಶಂಕರಪ್ಪನವರು, ಚಿತ್ತರಗಿ, ಬಾಗಲಕೋಟೆ.

೫. ಗುರುಸೇವಾಸಕ್ತ

ಶ್ರೀ ಜಿ. ಸಿ. ಶಿವರುದ್ರಪ್ಪನವರು, ಗಿರಿಯಾಪುರ.

೬. ಕಾವ್ಯಕಲಾನಿಪುಣ

ಶ್ರೀ ಲಕ್ಷ್ಮೀನರಸಿಂಹ ಶಾಸ್ತ್ರಿಗಳವರು, ಸಾಹಿತ್ಯಸೇವಾಸದನ ಸಂತೆ ಕಲ್ಲಹಳ್ಳಿ, ಚಿಂತಾಮಣಿ ತಾ||

೭. ಸುವರ್ಣ ಸೇವಾಪದಕವನ್ನು ಆಸ್ಥಾನವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯರವರಿಗೆ ಅನುಗ್ರಹಿಸಲಾಯಿತು.

---

# ಸನ್ಮಾನಿತರಾದ ಮಹನೀಯರು

## ಸಂಸ್ಥೆಗಳು

೧) ಕನ್ನಡ ಸಾಹಿತ್ಯ ಪರಿಷತ್ತು
ಅಧ್ಯಕ್ಷರು: ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳು. ರೂ. ೧೦೧-೦-೦.

## ಪತ್ರಿಕೆಗಳು

೨) ಶರಣ ಸಾಹಿತ್ಯ — ಸಂಪಾದಕರು: ಆಸ್ಥಾನವಿದ್ವಾನ್ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು. ರೂ. ೧೦೧-೦-೦.

೩) ನವಸಂದೇಶ, ಬಳ್ಳಾರಿ — ಸಂಪಾದಕರು: ಶ್ರೀ ಟಿ. ಎಚ್. ಎಂ. ಚಂದ್ರಶೇಖರ ಶಾಸ್ತ್ರಿಗಳವರು. ರೂ. ೧೦೧-೦-೦.

## ಪಂಡಿತರು

೪) ಶ್ರೀ ಅ. ನ. ಕೃಷ್ಣರಾಯರು ರೂ. ೫೦೧-೦-೦.

೫) ಕವಿಶೇಖರ ಎಚ್. ವಿ. ನಾರಾಯಣ ಶಾಸ್ತ್ರಿಗಳವರು ರೂ. ೧೦೧-೦-೦.

## ಕಲಾವಿದರು

೬) ವಚನಗಾಯನ ಪ್ರವೀಣ ಶ್ರೀ ಸಿ. ವಿ. ನಾಗರಾಜ್.

೭) ಆಸ್ಥಾನ ಸಂಗೀತ ವಿದ್ವಾನ್ ಶ್ರೀ ಶಿವರುದ್ರಪ್ಪನವರು, ಮೈಸೂರು.

೮) ಪುರಾಣ ಪ್ರವೀಣ ಶ್ರೀ ಮಹದೇವಪ್ಪನವರು.

೯) ಸೌ|| ಶಕುಂತಳಾಬಾಯಿ ಪಾಂಡುರಂಗರಾಯರು.

೧೦) ಗಮಕಿ ಶ್ರೀ ಎಂ. ರಾಘವೇಂದ್ರರಾಯರು.

೧೧) ಗಮಕಿ ಶ್ರೀ ಎಲ್. ಸಿದ್ಧಗಂಗದೇವರು.

೧೨) ಪಿಟೀಲುವಾದನಪಟು ಶ್ರೀ ಶಂಭು ಲಿಂಗಪ್ಪನವರು, ಅವರ ಸಂಗೀತಮಂಡಲಿ.

೧೩) ವೈದಿಕ ವಿದ್ಯಾರ್ಥಿಗಳು

---

# ಶ್ರೀಗಳವರ ಗ್ರಂಥಗಳಮೇಲಿನ ವಿಮರ್ಶೆಗಳು

**ಅಣ್ಣನ ಬದುಕು :—**

ಈಗಾಗಲೇ ಉಚ್ಚವರ್ಗದ ಹಲವು ಗ್ರಂಥಗಳನ್ನು ಕನ್ನಡಿಗರ ಕೈಗಿತ್ತು ಸದ್ಯದ ಸಾಹಿತ್ಯ ಪ್ರಪಂಚದಲ್ಲಿ ಅಗ್ರಸ್ಥಾನ ಪಡೆದಿರುವ ಶ್ರೀ ಜ.ಪ. ಚನ್ನಬಸವ ರಾಜ ದೇಶಿಕೇಂದ್ರಶಿವಾಚಾರ್ಯ ಸ್ವಾಮಿಗಳವರು ಕರುನಾಡ ಕಂದರ ಬಾಳ್ವೆಕೆಗಳಿಗಾಗಿ 'ಅಣ್ಣನ ಬದುಕ'ನ್ನು ನವೀನತಮ ರೀತಿಯಲ್ಲಿ ರೂಪಿಸಿ ಕನ್ನಡ ಗುಡಿಯ ಶೋಭೆಯನ್ನು ಮತ್ತಿಷ್ಟು ಹೆಚ್ಚಿಸಿದ್ದಾರೆ. ಬೆಳಗಿಸಿದ್ದಾರೆ. ಗುಡಿಗೆ ಹೊಂಗಳಸವಿಟ್ಟಿದ್ದಾರೆ.

ಜಗದ್ವಂದ್ಯ ಮಹಾತ್ಮಾ ಬಸವಣ್ಣನ ಮಾತುಗಳನ್ನಾಯ್ದುಕೊಂಡು ಅವುಗಳ ಸಹಜ ರೀತಿಯಲ್ಲಿಯೇ ಅಣ್ಣನ ಚರಿತ್ರಾಂಶವನ್ನು ಬಾಲ್ಯ, ಜವ್ವನ ಮತ್ತು ಚರಮಜೀವನಗಳ ರೂಪದಲ್ಲಿ ಹೊಂದಿಕೆಯಾಗಿ ಹೆಣೆದಿದ್ದಾರೆ; ಮತ್ತು ಅಣ್ಣನ ಭಾವಗಮ್ಯ ವಚನಗಳನ್ನು ತಮ್ಮ ಅಂತರ್ಗತ ಶಕ್ತಿಯುತ ಅನುಭಾವದಿಂದ ಅರಿದು ಅರಗಿಸಿಕೊಂಡು, ಅವುಗಳ ತಿಳಿಯನ್ನು ಸಾರವನ್ನು ಸರ್ವ ಸಾಮಾನ್ಯರಿಗೂ ರುಚಿಸುವಂತೆ ಸರಳ ಶೈಲಿಯಲ್ಲಿ ಬಿತ್ತರಿಸಿ ಸಾಹಿತ್ಯ ಸೌಂದರ್ಯೋಪಾಸಕರಿಗೆ ಪೂಜ್ಯರಾಗಿದ್ದಾರೆ; ಸಾಹಿತ್ಯಸಿಂಹಾಸನಾಧೀಶ್ವರರಾಗಿದ್ದಾರೆ.

ನಾವಿಲ್ಲಿ ಕಾಣುವ 'ಅಣ್ಣನ ಬದುಕು' ಲೋಕದ ಬದುಕಲ್ಲ, ಅಳಿಯುವ ಬಾಳಲ್ಲ. ಇಲ್ಲಿರುವದು ಅಣ್ಣನ ಅಧ್ಯಾತ್ಮ ಲೋಕದ ಅಮರ ಜೀವನ. ಅವನ ಬಾಲ್ಯ ಸಿದ್ಧನ ಲೀಲೆ. ಅವನ ಜವ್ವನ 'ಶರಣ ಸತಿ ಲಿಂಗಪತಿ'ಯ 'ದಾಂಪತ್ಯ ಭಾವ'ದ ಅಪೂರ್ವ ಜೀವನ. ಅವನ ಮನೆ ಮಹಾಮನೆ. ಅಲ್ಲಿರುವದು ಲೋಕದ ತೈಲ ದೀಪವಲ್ಲ. ತ್ರೈಕಾಲಿಕ 'ಅತೈಲಪೂರ' ಭಕ್ತಿ ಪ್ರದೀಪ. ಅವನ ತೋಟ ಬೆಳೆದು ಬಾಡುವ ಎಲೆಮರಗಳ ಜಗದ ತೋಟವಲ್ಲ. 'ತತ್ವದ ತೋಟ.' ಆತನ ತೋಟದ 'ಅನುಭವದ ನೋಟವನ್ನು' ನಾವಿಲ್ಲಿ ಕಾಣುವದು. ಅವನ 'ಚರಮ ಜೀವನ' ತಾನು ಬದುಕಿ ಮಾನವರನ್ನು

ಬದುಕಿಸುವ ವಿಶಾಲ ಜೀವನ. ಈ ಬಗೆಯಾಗಿ ಅಣ್ಣನ ಬದುಕಿನ ಮಹತ್ತತೆಯನ್ನು ಸರ್ವಾಂಗ ಸುಂದರವಾಗಿ ಸಾಹಿತ್ಯದಲ್ಲಿ ರೂಪುಗೊಳಿಸಿದ್ದಾರೆ. ಆದರೆ 'ಅದನ್ನು ನೋಡುವ ಕಣ್ಣು, ಪ್ರತಿಬಿಂಬಿಸಿಕೊಳ್ಳುವ ಹೃದಯ ಹಸನಾಗಿರಬೇಕು.' ಅಷ್ಟೆ.

ಪೂಜ್ಯ ಶ್ರೀಗಳವರು ಅಂತಹ ದೃಷ್ಟಿಯಿಂದ ಬರೆದುದರಿಂದಲೇ ಈ ಗ್ರಂಥಕ್ಕೆ ಒಂದು ಕಳೆ ಬಂದಿದೆ. ಅಣ್ಣನ ವಚನಗಳ ವ್ಯಾಪಕತೆ ಮತ್ತು ಭಾವಗಮ್ಯತೆಗಳ ಆಳವನ್ನರಿಯಲು ಶ್ರೀಗಳ ಈ ಕೃತಿಯು ಮಾಪದಂಡವಾಗಿದೆ. ಅಣ್ಣನ ಭಕ್ತಿಭಾವವು ಏಕಮುಖವಾಗಿದ್ದರೂ ಅದನ್ನು 'ನಾರದ ಭಕ್ತಿಸೂತ್ರ'ದ ನವವಿಧಭಾವಕ್ಕೆ ಹೋಲಿಸಿ ತೋರುವಲ್ಲಿ ಶ್ರೀಗಳವರ ಪ್ರತಿಭೆ ಕಮನೀಯವಾಗಿದೆ.

ಓದಿದಾಕ್ಷಣವೇ ಎದೆ ತಟ್ಟಿ ಮನಮುಟ್ಟಿ ಭಾವಪುಷ್ಪವರಳಬೇಕು; ಅಂಟಿಕೊಂಡ ಕತ್ತಲೆ ಕರಗಿ ಆತ್ಮ ಶ್ರೀ ಪ್ರದೀಪ್ತವಾಗಬೇಕು; ಈ ದೃಷ್ಟಿಯಿಂದ ಶ್ರೀಗಳವರ 'ಅಣ್ಣನ ಬದುಕು' ಒಂದು ಸತ್ಕಾವ್ಯವಾಗಿದೆ. ಇಂತಹ ದಿವ್ಯ ಸಾಹಿತ್ಯ ನಿರ್ಮಾಣಕ್ಕೆ ತಮ್ಮ ಜೀವನವನ್ನೇ ಮುಡುಪಾಗಿಟ್ಟಿರುವ ಶ್ರೀಗಳವರು ಉಳಿದ ಧರ್ಮ ಗುರುಗಳಿಗೂ ಆದರ್ಶಪ್ರಾಯರಾಗಿದ್ದಾರೆ.

ಶ್ರೀಗಳವರ ಸಾಹಿತ್ಯ ಗಂಗಾಪ್ರವಾಹದಂತೆ ಪವಿತ್ರವಾದುದು, ಶಾಂತಿಯುತವಾದುದು. ಅವರ ಲೇಖನಿಯಲ್ಲಿ ವ್ಯಾವಹಾರಿಕ ರೀತಿಯನ್ನು ಅಧ್ಯಾತ್ಮ ರಂಗಕ್ಕಿಳಿಸಿ, ಅದರ ಬೆಲೆಯನ್ನು ಹೆಚ್ಚಿಸುವ ಹಿರಿದಾದ ಕಲೆಯಿದೆ. ಅವರ ಶೈಲಿಯಲ್ಲಿ ಅಂತಃಸ್ಫೂರ್ತಿಯಿದೆ.

ಸತ್ಯಶುದ್ಧ ಜೀವನದಿಂದ ಹೊರಹೊಮ್ಮಿ ಬರುತ್ತಿರುವ ಶ್ರೀಗಳವರ ಕೃತಿರತ್ನಗಳು ಕನ್ನಡ ಸಾಹಿತ್ಯ ಭಂಡಾರದ ಚಿರನಿಧಿಗಳಾಗಿವೆ. ಶ್ರೀಗಳವರ ಅಮರ ಕೃತಿ 'ಅಣ್ಣನ ಬದುಕು' ಕನ್ನಡಿಗರ ಕೈಗನ್ನಡಿಯಾಗಿದೆ.

ಇಂದು ಇಂತಹ ಸುಂದರ ವಿಚಾರಪೂರ್ಣ ಸಾಹಿತ್ಯಕೃತಿಗಳನ್ನು ಪ್ರಕಾಶಕ್ಕೆ ತರುತ್ತಿರುವ 'ಪ್ರಬೋಧ ಗ್ರಂಥಮಾಲೆ'ಯ ಪ್ರಕಾಶಕರ ಪ್ರಯತ್ನ ಸ್ತುತ್ಯವಾಗಿದೆ.

ಮೇ ೧೯೫೫.
ಸುಕುಮಾರ

—ಶ್ರೀ ಮಹಾಂತ ದೇವರು "ಸಾಹಿತ್ಯರತ್ನ"
ಬನಾರಸ

**ಅಣ್ಣನ ಬದುಕು :—**

ಈಗಾಗಲೇ ಹಲವು ಕನ್ನಡ ಗ್ರಂಥಗಳನ್ನು ಬರೆದು ದೇಶಕ್ಕೆ ಸುಪರಿಚಿತರಾಗಿರುವ ಶ್ರೀ ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯಸ್ವಾಮಿಗಳು 'ಅಣ್ಣನ ಬದುಕು' ಎಂಬ ಈ ಗ್ರಂಥವನ್ನು ಬರೆದು ಕನ್ನಡಿಗರ ಕೈಗೆ ಕೊಟ್ಟಿದ್ದಾರೆ.

ಈ ಗ್ರಂಥವು ಶ್ರೀ ಬಸವೇಶ್ವರನ ಜೀವನ ಚರಿತ್ರೆಯನ್ನು ನಿರೂಪಿಸುತ್ತದೆ. ಇದರಲ್ಲಿ ಅಣ್ಣನವರ ಬಾಲ್ಯ, ಜೌವ್ವನ, ಚರಮ ಜೀವನಗಳನ್ನು ಕುರಿತು ಮೂರು ಘಟ್ಟಗಳಿವೆ. ಲೇಖಕರ ದೃಷ್ಟಿ ನೂತನವಾಗಿದೆ. ಈ ಗ್ರಂಥವು ವಾಚನಾರ್ಹವೆಂದು ಮುನ್ನುಡಿಕಾರರಾದ ಶ್ರೀ|| ಎಂ. ಆರ್. ಶ್ರೀರವರು ಹೇಳಿದ್ದಾರೆ. ಶ್ರೀ|| ಕೆ. ಎಸ್. ಧರಣೇಂದ್ರಯ್ಯನವರು ಇದಕ್ಕೆ 'ನಿವೇಧನೆ' ಬರೆದಿದ್ದಾರೆ. ಒಟ್ಟನಲ್ಲಿ ಗ್ರಂಥವು ಉಪಯುಕ್ತವಾಗಿದೆ. ಬಸವಣ್ಣನವರ ಜೀವನದ ವಿಷಯಗಳನ್ನು ಅಗತ್ಯವಾಗಿ ಓದಬೇಕು.

ಜನವರಿ ೧೯೫೧ — ಶರಣ ಸಾಹಿತ್ಯ.

**ಕಾರಣಿಕ ಕುಮಾರಯೋಗಿ :—**

ಈ ಗ್ರಂಥವು ಮಹಾ ತಪಸ್ವಿಗಳೂ, ಶಿವಯೋಗ ಮಂದಿರದ ಸಂಸ್ಥಾಪಕರೂ ಆದ ಲಿಂಗೈಕ್ಯ ಹಾನಗಲ್ಲ ಕುಮಾರಸ್ವಾಮಿಗಳ ಜೀವನ ಚರಿತ್ರೆಯನ್ನು ಒಳಗೊಂಡಿದೆ.

ಪೂಜ್ಯ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳು ವೀರಶೈವ ಗುರು – ಜಂಗಮ ವೃಂದದಲ್ಲಿ ಉನ್ನತವಾದ ಸ್ಥಾನವನ್ನು ಗಳಿಸಿದವರು. ಉದಾತ್ತವಾದ ಭಾವನೆಗಳಿಂದಲೂ, ಉಜ್ವಲವಾದ ನಡೆನುಡಿಗಳಿಂದಲೂ, ಮಹೋನ್ನತವಾದ ಕಾರ್ಯಗಳಿಂದಲೂ ಅಲಂಕೃತರಾಗಿದ್ದವರು. ಅಖಿಲ ಭಾರತ ವೀರಶೈವ ಮಹಾಸಭೆಯ ಸಂಸ್ಥಾಪಕರೂ, ಶಿವಯೋಗ ಮಂದಿರವನ್ನು ನಿರ್ಮಿಸಿದ ಪೂಜ್ಯರೂ ಆದ ಈ ಹಾನಗಲ್ಲ ಕುಮಾರಸ್ವಾಮಿಗಳೇ ಆಗಿದ್ದಾರೆ.

ಇಂತಹ ಮಹಾನುಭಾವರ ಚರಿತ್ರೆಯನ್ನು ಕನ್ನಡ ಸಾಹಿತ್ಯ ಪ್ರೇಮಿಗಳಾದ ನಿಡುಮಾಮಿಡಿಯ ಶ್ರೀ ಶ್ರೀಗಳವರು ಬಹಳ ಸುಂದರವಾಗಿ ಚಿತ್ರಿಸಿರುತ್ತಾರೆ. ಪ್ರತಿಯೊಬ್ಬ ಕನ್ನಡಿಗನೂ, ವಿಶೇಷವಾಗಿ ವೀರಶೈವನೂ ಈ ಪುಸ್ತಕವನ್ನು ಓದಿ ಇದರ ಪ್ರಯೋಜನ ಪಡೆಯಬೇಕು.

ಶರಣಸಾಹಿತ್ಯ

ಜನವರಿ ೧೯೫೧

ಕನ್ನಡ ನಾಡಿನಲ್ಲಿ, ಆದರಲ್ಲಿಯೂ ವೀರಶೈವ ಸಮಾಜದಲ್ಲಿ ಇದುವರೆಗೆ ಅನೇಕ ಮಹಾ ವಿಭೂತಿಗಳು ಜನ್ಮ ತಾಳಿದ್ದಾರೆ; ಇಂಥವರಲ್ಲಿ ಕ್ರಿ. ಶ. ೧೮೬೭ನೇ ಪ್ರಭವ ಸಂವತ್ಸರದಲ್ಲಿ ಜನ್ಮತಾಳಿದ ಹಾನಗಲ್ಲ ಶ್ರೀ ಕುಮಾರ ಯೋಗಿಗಳೂ ಒಬ್ಬರು.

ಇನರ ಅದ್ವಿತೀಯ ಆತ್ಮಚರಿತ್ರೆಯನ್ನು ಅದ್ವಿತೀಯ ರೀತಿಯಲ್ಲಿ ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು ಈ ಗ್ರಂಥದಲ್ಲಿ ಬರೆದಿದ್ದಾರೆ.

ಶ್ರೀ ಕುಮಾರಯೋಗಿಗಳ ಜನನ, ಅವರ ಆಧ್ಯಾತ್ಮಿಕ ಪ್ರವೃತ್ತಿ, ಅವರು ಮಾಡಿದ ಕಾರ್ಯ, ಅವರು ಬೋಧಿಸಿದ ತತ್ವಗಳು ಎಲ್ಲವೂ ಸ್ವಾರಸ್ಯ ವಾಗಿ ಪ್ರೌಢರೀತಿಯಲ್ಲಿ, ಗಂಭೀರ ಶೈಲಿಯಲ್ಲಿ ಮತ್ತು ಬಹಳ ವೈವಿಧ್ಯ ದಿಂದ ನಿರೂಪಿಸಲ್ಪಟ್ಟವೆ. ಗ್ರಂಥಕಾರರು ಶ್ರೀ ಕುಮಾರಯೋಗಿಗಳು ಕಾರಣಿಕ ಪುರುಷರು ಎಂಬುದನ್ನು ಸಮರ್ಥಿಸಿದ್ದಾರೆ. ಇಂಥ ಜ್ಞಾನ ಪ್ರಬೋಧಕ ಗ್ರಂಥವನ್ನು ರಚಿಸಿ ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂಪ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಎಲ್ಲರಿಗೂ ಮಹದುಪಕಾರಮಾಡಿದ್ದಾರೆ.

೧೩-೫-೫೧ ಪ್ರಜಾಮತ.

**ವಚನಾಂಜಲಿ :—**

ಈ ಗ್ರಂಥದಲ್ಲಿಯ ವಚನ ವೈವಿಧ್ಯವನ್ನು ಅನುಸರಿಸಿ ಬಹಿರಂಗ, ಅಂತರಂಗ, ವೆಂಬುದಾಗಿ ಎರಡು ಖಂಡವಾಗಿ ವಿಭಾಗಿಸಲ್ಪಟ್ಟಿದೆ. ಬಹಿರಂಗ ವಿಭಾಗದಲ್ಲಿ ಭಾರತಭೂಮಿ, ಪ್ರಾಂತೀಕರಣ, ಸಿನಿಮಾ, ಧೂಮಪಾನ ಮುಂತಾದ ೫೬ ವಿಷಯಗಳೂ ಅಂತರಂಗ ಭಾಗದಲ್ಲಿ ಧರ್ಮಾರ್ಥ, ಆತ್ಮ ಹತ್ಯ, ಮುಂತಾದ ೧೮ ವಿಷಯಗಳಿವೆ. ವಚನಗಳ ಶೈಲಿಯು ೧೨ನೇ ಶತಮಾನದ ಬಸವಾದಿ ಪ್ರಮಥರ ಶೈಲಿಯನ್ನು ಹೋಲುತ್ತದೆ. ಈ ವಚನ ಗಳಲ್ಲಿರುವ ಒಂದೊಂದು ಮಾತು ಅಮೌಲ್ಯ ರತ್ನದಂತಿದ್ದು ಗೂಢವಾದ ಗಹನ ವಿಚಾರಗಳನ್ನು ಸುಲಭವಾಗಿ ತಿಳಿಸುತ್ತದೆ. ಓದುಗರು ಆನಂದಪಟ್ಟು ಆತ್ಮಾನುಭಾವದ ಜೊತೆಗೆ ವಿಶ್ವಾನುಭವವನ್ನು ಪಡೆದುಕೊಳ್ಳಬಹುದು. ಭಾವ ಹಿರಿದು. ಪ್ರತಿಯೊಬ್ಬ ಕನ್ನಡಿಗನು ಅವಶ್ಯ ಸಂಗ್ರಹಿಸಬೇಕಾದ ಗ್ರಂಥ. ಮುದ್ದಾದ ಮುದ್ರಣ. ಅಂದವಾದ ಮೇಲುಹೊದಿಕೆ.

ಯಾದಗಿರಿ, ಜೂನ್ ೧೯೫೧ ಅಮರವಾಣಿ

## ಶ್ರೀ ಜಗದ್ಗುರು ನಿಡುಮಾಮಿಡಿ ಪ್ರಬೋಧ ಪುಸ್ತಕಮಾಲೆಯಲ್ಲಿ ದೊರೆಯುವ ಗ್ರಂಥಗಳು

೧. ಇಷ್ಟಲಿಂಗ – ವಿಜ್ಞಾನ ೨. ಸೀಳ್ನುಡಿ ೩. ಹೆಮ್ಮಾಗಳು
೪. ಮುಪ್ಪಿನಾರ್ಯರ ಭಾವಪಾತ್ರಗಳು ೫. ಶಿವದೇವ ವಿಜಯ
೬. ಪಕ್ಷ್ಯೃಲಾಕ್ಷಿ (ಕಾವ್ಯ) ೭. ಅರ್ಜುನವಿಜಯ
೮. ವಚನಾಂಜಲಿ, ೯. ವಚನಮಂಜರಿ
೧೦. ಸಂಸ್ಕೃತ ಸ್ತವನಮಂಜರಿ (ಬಸವಪ್ಪಶಾಸ್ತ್ರಿಕೃತ)
೧೧. ಕೈವಲ್ಯೋಪ ನಿಷತ್ ಭಾಷ್ಯ (ಕನ್ನಡ ಭಾವಪ್ರಕಾಶಸಹಿತ)
೧೨. ಹೇಮರೆಡ್ಡಿ ಮಲ್ಲಮ್ಮ – ಯೋಗಿರಾಜ ವೇಮಣ್ಣ
೧೩. ಶಿವನಸೋಲು ೧೪. ಜೀವಜ್ಯೋತಿ
೧೫. ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರೀ (ಜೀವನ-ಕೃತಿ ವಿಮರ್ಶೆ)
೧೬. ರೇಣುಕವಿಜಯ (ಬಸವಪ್ಪಶಾಸ್ತ್ರಿಕೃತ)
೧೭. ವೀರಶೈವ ಪ್ರಯೋಗರತ್ನಂ (ಸಸ್ವರ-ಸಟ್ಟಿಪ್ಪಣ, ಸಚಿತ್ರ)
೧೮. ಕನ್ನಡ ಲಿಂಗಾಧಾರಣ ಚಂದ್ರಿಕೆ
೧೯. ಗುರುವಿನಗೆಲುವು ೨೦. ಅಮೃತವಾಣಿ
೨೧. ಇಮ್ಮಡಿ ಕರಿಬಸವೇಂದ್ರರ ಒಸಗೆ
೨೨. ಆಯ್ದಕ್ಕಿ ಮಾರಯ್ಯ, ೨೩. ಅಕ್ಕನಲಾವಣಿ,
೨೪. ಅಕ್ಕನ ಬಾಳು, ೨೫. ಸರ್ವಜ್ಞಾನಿ ಚನ್ನಬಸವಣ್ಣ,
೨೬. ಮಹಾದೇವಿಯಮ್ಮನ ವಚನಗಳು
೨೭. ಅಕ್ಕನ ಯೋಗಾಂಗ ತ್ರಿವಿಧಿ
೨೮. ಮಣಿಕಾಂತಿ (ಕನ್ನಡ ಸಿದ್ಧಾಂತ ಶಿಖಾಮಣಿ)
೨೯. ಶ್ರೀ ನಿಡುಮಾಮಿಡಿ ಸನ್ನಿಧಿಯವರು (ಅ. ನ. ಕೃ. ಕೃತ)

### ಅಚ್ಚಿನಲ್ಲಿ

೧. ಶ್ರೀ ಶೈಲ ಪಂಡಿತಾರಾಧ್ಯ ಚರಿತಮು (ತೆಲುಗು) (ಪುಲ್ಲಕವಿಕೃತ)
೨. ಶಿವಪೂಜಾವಿಧಿ (ಸಸ್ವರ)

---

# ಅ. ನ. ಕೃಷ್ಣರಾಯರ ಗ್ರಂಥಗಳು

ವೀರಶೈವ ಸಾಹಿತ್ಯ:

ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ.
ಬಸವಣ್ಣನವರ ಅಮೃತವಾಣಿ.
ಮರುಳ ಸಿದ್ಧ ಕಾವ್ಯ.
ಜಗಜ್ಜ್ಯೋತಿ ಬಸವೇಶ್ವರ ನಾಟಕ.

ಸಾಹಿತ್ಯ ವಿಮರ್ಶೆ:

ಸಾಹಿತ್ಯ ಮತ್ತು ಜೀವನ.
ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ.
ಕೈಲಾಸಂ.

ಉಪನ್ಯಾಸ:

ಸಜೀವ ಸಾಹಿತ್ಯ.
ಸಂಸ್ಕೃತಿಯೆಂದರೇನು?

ಜೀವನ ಚರಿತ್ರೆ:

ಸ್ವಾಮಿ ವಿವೇಕಾನಂದ.
ಭಾರತದ ಬಾಪೂ.
ಶ್ರೀ ನಿಡುಮಾಮಿಡಿ ಸನ್ನಿಧಾನ.
ಕನ್ನಡ ಕುಲರಸಿಕರು.

ಲಲಿತಕಲೆ:

ರಾಜಾ ರವಿವರ್ಮ.
ಕರ್ನಾಟಕದ ಕಲಾವಿದರು – ಭಾಗ ೧.
ಕರ್ನಾಟಕದ ಕಲಾವಿದರು – ಭಾಗ ೨.

**ಪ್ರಬಂಧ :**

ಹೊಸಹುಟ್ಟು.
ಕನ್ನಡದ ದಾರಿ.
ಅಖಂಡ ಕರ್ನಾಟಕ.
ಕನ್ನಡದ ಹಿತಚಿಂತನೆ.

**ಹರಟೆ :**

ಪೊರಕೆ.
ನನ್ನನ್ನು ನಾನೇ ಕಂಡೆ.

**ಕಾದಂಬರಿ :**

ಸಂಧ್ಯಾರಾಗ.
ಉದಯರಾಗ.
ಜೀವನಯಾತ್ರೆ.
ಸಾಹಿತ್ಯರತ್ನ.
ಮಂಗಳಸೂತ್ರ.
ನಟಸಾರ್ವಭೌಮ.
ತಾಯಿಯ ಕರುಳು.
ಹೊಸಲು ದಾಟಿದ ಹೆಣ್ಣು.
ಕಣ್ಣೀರು.
ಮುಯ್ಯಿಗೆಮುಯ್ಯಿ.
ಅರುಳು ಮರುಳು.
ಕಾಲಚಕ್ರ.
ನಗ್ನಸತ್ಯ.
ಅಮರ ಆಗಸ್ಟ್.

**ಸಣ್ಣ ಕಥೆ :**

ಮಿಂಚು.
ಕಿಡಿ.

ಕಾಮನಸೋಲು.

ಪಾಪ ಪುಣ್ಯ.

ಅಗ್ನಿಕನ್ಯೆ.

ಜಾತಿಹೀನನ ಮನೆಯಜೋತಿ.

ಶಿಲ್ಪಿ.

ಕಣ್ಣುಮುಚ್ಚಾಲೆ.

**ನಾಟಕ :**

ಮದುವೆಯೋ ಮನೆಹಾಳೋ.

ಆಹುತಿ.

ಆದದ್ದೇನು.

ಬಣ್ಣದ ಬೀಸಣಿಗೆ.

ಗೋಮುಖವ್ಯಾಘ್ರ.

ರಜಪೂತಲಕ್ಷ್ಮಿ.

ಸ್ವರ್ಣಮೂರ್ತಿ.

ಹಿರಣ್ಯಕಶಿಪು.

ಕಿತ್ತೂರರಾಣಿ ಚೆನ್ನಮ್ಮ.

**ಸಂಕಲನ :**

ಮ್ಯಾಕ್ಸಿ ಗಾರ್ಕಿ.

ಕಾಮನಬಿಲ್ಲು – ಭಾಗ ೧.

ಕಾಮನಬಿಲ್ಲು – ಭಾಗ ೨.

ಪ್ರಗತಿಶೀಲ ಸಾಹಿತ್ಯ.

ರಸಋಷಿ.

ಪ್ರಣಯಗೀತೆ.

**ಅನುವಾದ :**

ಹಿಂದೂಸ್ಥಾನದ ಕಥೆ.

---

